# ಪ್ರತಿಭಾ ಗ್ರಂಥಮಾಲೆ, ಧಾರವಾಡ

---

**ಯುಗಾದಿಯಿಂದ ಯುಗಾದಿಗೆ**
**ಎಂಟು ಉತ್ತಮ ಪುಸ್ತಕಗಳು**

●

ವಾರ್ಷಿಕ ಚಂದಾ :
ಒಂಬತ್ತು ರೂಪಾಯಿ (ಅಂಚೆ ರಜಿಸ್ಟರ್ ವೆಚ್ಚ ಸೇರಿ)

✳

## ಮೊದಲ ಎರಡು ವರ್ಷಗಳಲ್ಲಿ ಪ್ರಕಟವಾದ ಪುಸ್ತಕಗಳು

| | | |
|---|---|---|
| ೧ | ಘಾಟೀಮುದುಕ (ದೇವುಡು) | ೧–೮–೦ |
| ೨ | ರಾಜಲಕ್ಷ್ಮಿ (ಶರತ್) | ೧–೮–೦ |
| ೩ | ಅನ್ನಪೂರ್ಣಾಮಂದಿರ (ನಿರುಪಮಾದೇವಿ) | ೨–೦–೦ |
| ೪–೫ | ಸಾವಿನ ಉಡಿಯಲ್ಲಿ (ಎಸ್ಕೆ) | ೩–೦–೦ |
| ೬ | ವೈಕುಂಠನ ಮೃತ್ಯುಪತ್ರ (ಶರತ್) | ೧–೮–೦ |
| ೭ | ಚಕಮಕಿ (ಲ. ಜಿ. ಬೇಂದ್ರೆ) | ೨–೦–೦ |
| ೮–೯ | ಗಂಡುಹೆಣ್ಣಿನ ಸಮಸ್ಯೆ (ಕುಪ್ಪಮ್ಮ) | ೩–೮–೦ |
| ೧೦ | ಹೆತ್ತಳಾ ತಾಯಿ (ಕಾರಂತ) | ೨–೦–೦ |
| ೧೧ | ಭೂಮಾತೆ ಮತ್ತು ಮಂದಿರ (ಶರತ್ ಮತ್ತು ಪರ್ಲಬಕ್) | ೧–೮–೦ |
| ೧೨–೧೩ | ಬಿರುಗಾಳಿ (ಪ್ರೊ. ಫಡಕೆ) | ೩–೮–೦ |
| ೧೪ | ಷೋಡಶಿ (ಶರತ್ಕಾದಂಬರಿ) | ೨–೦–೦ |
| ೧೫ | ರಮಾನಾಥ (ಪ್ರೇಮಚಂದ) | ೩–೦–೦ |
| ೧೬ | ನೇತಾಜಿ (ಮಲ್ಲಾರಿ) | ೧–೮–೦ |

ನಮ್ಮ ಚಂದಾದಾರರಿಗೆ ಮೇಲಿನ ಪುಸ್ತಕಗಳನ್ನು ಮೂಲ ಬೆಲೆಗೇ (ಅಂಚೆ ವೆಚ್ಚ ನಾವೇ ವಹಿಸಿ) ತಲುಪುವಂತೆ ಕಳಿಸುತ್ತೇವೆ. ಮೂಲ ಬೆಲೆಯನ್ನು ಮಾತ್ರ M. O. ಮಾಡಿದರೆ ಸಾಕು.

ಪ್ರತಿಭಾ ಗ್ರಂಥ ಮಾಲೆ, ಧಾರವಾಡ

ವರ್ಷ ೩: ಕಿರಣ ೧

# ರೇಡಿಯೋ ನಾಟಕಗಳು

"ಬೀಚಿ" ಬಳ್ಳಾರಿ



೧೯೪೭ ಎಪ್ರಿಲ್  ಬೆಲೆ ೧-೮-೦

# ಒಂದು ಮಾತು



ಏಕಾಂಕ ನಾಟಕದ ಹೊಸ ಅಂಗವಾಗಿ ಕೊನೆ ಚಿಗುರುತ್ತಿರುವುದು. ರೇಡಿಯೋ ನಾಟಕ-- ನಸುಕಿನಲ್ಲಿಯ ಸೂರ್ಯನಂತೆ ಈಗೀಗ ತಲೆದೋರುತ್ತಿದೆ.

ಈ ನಾಟಕದ ರೀತಿಯೇ ಬೇರೆ, ಕ್ರಮವೇ ಹೊಸದು. ವಿಧಾನದಲ್ಲಿ ನವೀನತೆ ಇದೆ. ಸಂಭಾಷಣೆಗಳು ಚಿಕ್ಕವಿರಬೇಕು ; ಅವುಗಳಲ್ಲಿ ಓಟ ಬೇಕು; ಓಟದೊಡನೆ ಹಿಡಿತ ಬೇಕು ಕಾಲು ಗಂಟೆಯಲ್ಲಿಯೇ ನಾಟಕವು ಮುಗಿಯಬೇಕು. ವೇಷಕ್ಕೆ ಬಣ್ಣವಿಲ್ಲ. ಬೂದಿ ಇಲ್ಲ. ನಾಟಕವಾಡುವುದು ರೇಡಿಯೋ ನಿಲಯದಲ್ಲಿ, ಕೇಳುವವರು ತಮ್ಮ ತಮ್ಮ ಮನೆಗಳಲ್ಲಿ, ನೂರಾರು ಮೈಲಿಗಳ ಆ ಬದಿ ಮುಂದೆ ಮಾತ್ರ ರೇಡಿಯೋ ಪೆಟ್ಟಿಗೆ. ಇದು ಬರೀ ನಾಟಕವಷ್ಟೆ ಅಲ್ಲ, ಕುರುಡನಿಗಾಗಿ ಆಡಿದ ನಾಟಕ. ಸಿನೇಮಾದ ಸಾಮುಗ್ರಿಯ ಅನುಕೂಲತೆ– ಕೇಳಿದಾಗ ಗುಡುಗು, ಕರೆದಾಗ ಸಿಡಿಲು, ಕುದುರೆಯ ಓಟದ ಸಪ್ಪಳ, ಖಡ್ಗಗಳ ಚಳಪಳ, ರೈಲಿನ ಕೂಗು, ಕಾರಿನ ಹಾರನ್ನು, ಸಹಸ್ರಾರು ಜನಸಂದಣಿಯ ಗಜಿಬಿಜಿ, ಮಗೂನ ಅಳು, ಅಜ್ಜನ ಕೆಮ್ಮು ಎಲ್ಲವೂ ಬೇಕಾದಾಗ ತೆಗೆದುಕೊಳ್ಳಲು ತಯಾರಾಗಿರುತ್ತವೆ. ಕಿವಿಗಾಗಿ ಆಡುವ ನಾಟಕವೆಂಬುದನ್ನು ನೆನಪಿನಲ್ಲಿಟ್ಟು ಓದುತ್ತ ಹೋದರೆ ರೇಡಿಯೋದ ಮುಂದೆ ಕೇಳುವ ಅನುಭವವಾಗಬಹುದು. ಇವುಗಳಲ್ಲಿಯ ಮೊದಲನೆಯ ಆರು ನಾಟಕಗಳನ್ನು ಮದರಾಸು ರೇಡಿಯೋ ನಿಲಯದಿಂದ ಆಡಿ ಆಯಿತು. ಬೇರೆರಡು ಜಯಂತಿಯಲ್ಲಿ ಈವೊಳಗಾಗಿ ಅಚ್ಚಾಗಿದ್ದವು. ಪುಸ್ತಕವಾಗಿ ಪ್ರಕಟಿಸಲು ಅನುಮತಿ ಕೊಟ್ಟ ರೇಡಿಯೋ ನಿಲಯಕ್ಕೂ ಜಯಂತಿಯ ಸಂಪಾದಕರಿಗೂ ನಾನು ಋಣಿ. ಕಡೆಯದಾಗಿರುವ ‘ಏಕೀಕರಣವು’ ಹೊರಬೀಳುವುದು ಇದೇ ಮೊದಲನೆಯ ಬಾರಿ. ಅದು ಮಾತ್ರ ಈ ಚಿಕ್ಕ ನಾಟಕಗಳಿಗಿಂತ ದೊಡ್ಡದೂ, ದೊಡ್ಡ ನಾಟಕಗಳಿಗಿಂತ ಚಿಕ್ಕದೂ

ಆಗಿದೆ. ಕನ್ನಡದ ವಿವಿಧ ಮಾದರಿಯನ್ನು ಗಮನಿಸಿ, ಆಯಾ ರೀತಿಯಲ್ಲಿ ಪಳಗಿದರೆ ಓದುವುದು ಹೆಚ್ಚು ಸುಲಭವಾಗುವುದು.

ಈ ನಾಟಕಗಳು ನಮ್ಮ ಸಮಾಜದ ಬೇರೆ ಬೇರೆ ದೃಶ್ಯಗಳು ಹಾಸ್ಯ ರಸವು ಹಿನ್ನೆಲೆಯಾಗಿ ನಗು ಒಳಹರಿದಿದೆ. ನಕ್ಕು ನಗಿಸುವ ನಗು ಚಿನ್ನದ ಹೊಗೆ. “ನಕ್ಕು ಜಗತ್ತನ್ನೇ ನಗಿಸು— ಅತ್ತು ನೀನೊಬ್ಬನೇ ಅಳು” ಎನ್ನುವುದು ಶ್ರೇಷ್ಠವಾದ ಮಾತು. ನಗೆ ನಗಬಲ್ಲೆಲ್ಲರ ಸೊತ್ತು. ಬಳಸಿದಂತೆಲ್ಲ ಬೆಳೆಯುವ ಅಕ್ಷಯ ಪಾತ್ರೆ. ತಾನು ನಕ್ಕಾಗ ಅದನ್ನು ಇತರರಿಗೂ ಬೀರಬೇಕೆಂಬಾಶೆಯಾಗುವುದು ಸಹಜ. ನನ್ನ ನಗೆಯನ್ನು ತಮ್ಮ ನಗೆಯಿಂದ ಗುರುತಿಸಿದರೆ ಸಾಕು— ತಮ್ಮ ನಗುವೇ ನನಗೆ ದೊರೆತ ಬಹುಮಾನ.

ಶ್, ಏಳುಗಂಟೆಯಾಯಿತು, ನಾಟಕ ಪ್ರಾರಂಭ.

ಇತಿ

ಬಳ್ಳಾರಿ ಬೀಚಿ

---

# ಸಂಪಾದಕರ ನುಡಿ

ಇದೀಗ ನಮ್ಮ ಪ್ರತಿಭಾ ಗ್ರಂಥಮಾಲೆಯ ಮೂರನೆಯ ವರ್ಷವು ಆರಂಭವಾಯಿತೆಂದು ತಿಳಿಸಲು ಆನಂದವಾಗುತ್ತಿದೆ. ಈ ಸಂದರ್ಭದಲ್ಲಿ ಸಹೃದಯ ವಾಚಕರೊಡನೆ ನಮ್ಮ ಕಳೆದೆರಡು ವರುಷಗಳ ಅಲ್ಪ ಸೇವೆಯ ಬಗೆಗೆ ನಾಲ್ಕು ಮಾತುಗಳನ್ನಾಡಿದರೆ ಅಪ್ರಸ್ತುತವೆನಿಸದೆಂದು ಭಾವಿಸಿದ್ದೇವೆ. ಆ ಹದಿನಾರು ಕಿರಣಗಳಲ್ಲಿ ಮೂವರು ಬೇರೆ ಬೇರೆ ಲೇಖಕರ ಮೂರು ಸ್ವತಂತ್ರ ಕೃತಿಗಳನ್ನು (ಎರಡು ಕಾದಂಬರಿ, ಒಂದು ಕಥಾಸಂಗ್ರಹ) ಒಬ್ಬರ ಸ್ವತಂತ್ರ ರೀತಿಯಲ್ಲಿ ಅನುವಾದಿಸಿದ ಒಂದು ಕಥಾ ಸಂಗ್ರಹವನ್ನು ಒದಗಿಸಿದ್ದೇವೆ. ಇನ್ನುಳಿದ ಅನುವಾದ ಸಂಗ್ರಹಗಳಲ್ಲಿ ರಶ್ಯದ ಕ್ರಾಂತಿಗೆ ಸಂಬಂಧಪಟ್ಟ ಸಾಹಸಮಯವಾದ ಕಾದಂಬರಿಯೊಂದು, ನೇತಾಜಿ ಸುಭಾಷ ಬೋಸರ ವೀರಜೀವನದ ಕಥೆಯೊಂದು : ಎರಡೂ ತಮಗೆ ಒಳ್ಳೇ ಸ್ಫೂರ್ತಿದಾಯಕವಾದುವೆಂದು ನಮ್ಮ ನಂಬುಗೆ. ಉಳಿದವಲ್ಲಿ ಜನಪ್ರಿಯ ಶ್ರೀ. ಶರಚ್ಚಂದ್ರರ ಕಾದಂಬರಿಗಳೆರಡು, ಕಥಾಸಂಗ್ರಹವೊಂದು; ಮತ್ತೆ ಕೆಲವು ಭಾರತದ ಪ್ರಸಿದ್ಧ ಲೇಖಕರ ಕೃತಿಗಳು. ಇದು ಅಗಾಧ ಸಾಹಿತ್ಯ ಸೇವೆಯೆಂದು ಹೇಳಿಕೊಳ್ಳುವುದು ನಮ್ಮ ಉದ್ದೇಶವಲ್ಲ; ಸ್ವತಂತ್ರ ಲೇಖಕರಿಗೂ ಪ್ರೋತ್ಸಾಹನ ಕೊಟ್ಟಿದ್ದೇವೆ, ಅನುವಾದಗಳನ್ನು ಕೂಡ ಉತ್ತಮ ಲೇಖಕರ ಕೃತಿಗಳಿಂದಲೇ ಬಹುಶಃ ಎತ್ತಿಕೊಟ್ಟಿದ್ದೇವೆ ಎಂಬುದನ್ನು ತಾವು ಗ್ರಹಿಸಿದರೆ ಸಾಕು.

ಈ ಮೂರನೆಯ ವರ್ಷದ ಆರಂಭವು ಕೂಡ ಸ್ವತಂತ್ರ ಕೃತಿಯಿಂದಲೇ ಆಗಿದೆ. ಈವರೆಗೆ ಮಾಲೆಯಲ್ಲಿ ಮೈಸೂರು, ಮಂಗಳೂರು, ಕಾರವಾರ, ಧಾರವಾಡ ಕಡೆಯವರ ಪುಸ್ತಕಗಳು ಪ್ರಕಟವಾಗಿವೆ ; ಈಗಲೀ 'ರೇಡಿಯೋ ನಾಟಕಗಳು ' ಬಳ್ಳಾರಿಯ ಬೀಚಿ ಅವರದು. ಇದರಿಂದ ನಮ್ಮ ಮಾಲೆಯಲ್ಲಿ ಬಳ್ಳಾರಿಗೂ ಪ್ರಾತಿನಿಧ್ಯ ದೊರೆತುದಲ್ಲದೆ. ಲಲಿತವಾಙ್ಮಯದ ಒಂದಂಗವಾದ ನಾಟಕ ಜಾತಿಗೂ ಸ್ಥಾನ ಕೊಟ್ಟಿದೆ. ಲೇಖಕರೇ ಹೇಳಿದಂತೆ ಈ ನಾಟಕಗಳಲ್ಲಿ ಪ್ರಾಮುಖ್ಯವಾಗಿ ಇರಬೇಕಾದ ಹಾಸ್ಯರಸವು ಹಿನ್ನೆಲೆಯಾಗಿ

ನಿಂತಿದೆ. ಅದಕ್ಕೆ ತಕ್ಕ ಭಾಷೆಯನ್ನು ಬಳಸಿದ್ದಾರೆ. ಇದು ತಮ್ಮನ್ನು ಮೆಚ್ಚಿಸುವುದೆಂಬ ಭರವಸೆ ನಮಗಿದೆ.

ಇನ್ನು ಮುಂದೆ ಕೂಡ ಉತ್ತಮ ಕೃತಿಗಳನ್ನು ಒದಗಿಸಬೇಕೆಂಬ ನಮ್ಮ ಉದ್ದೇಶವನ್ನು ಕಾಯ್ದುಕೊಂಡು ಬರುವೆವೆಂದು ತಮಗೆ ತಿಳಿಸ ಬಯಸುತ್ತೇವೆ. ಸ್ವತಂತ್ರ ಕೃತಿಗಳಿಗೆ ಯಾವಾಗಲೂ ವಿಶೇಷ ಬೆಲೆಯುಂಟು. ಆದರೆ 'ಅನುವಾದಗಳೆಲ್ಲ ಹೊಲಸು' ಎಂಬ ಸಂಕುಚಿತ ದೃಷ್ಟಿಯಿಂದ ಅಸಡ್ಡೆ ಮಾಡಿ, ಉತ್ತಮ ಸಾಹಿತ್ಯಕ್ಕೆ ವಾಚಕರನ್ನು ಎರವು ಮಾಡಲಾರೆವು.

ಈ ಕೃತಿಯನ್ನು ಒದಗಿಸಿದ 'ಬೀಚಿ'ಯವರಿಗೆ ನಾವು ಕೃತಜ್ಞತೆ ಸಲ್ಲಿಸದಿರಲಾರೆವು. ನಮ್ಮ ಮಾಲಿಗೊಂದು ಸುಂದರ ದ್ವಿವರ್ಣಚಿತ್ರವನ್ನು ಬರೆದುಕೊಟ್ಟ ಶ್ರೀ. ಉಪಾಧ್ಯಾಯ ಕೃಷ್ಣರಾಯರಿಗೂ ಪಡಿಯಚ್ಚು ಮಾಡಿ ಕೊಟ್ಟ ಶ್ರೀನಿವಾಸ ಮತ್ತು ಕಂಪನಿಯ ಸಂಚಾಲಕರಾದ ಶ್ರೀ. ಜೋಂಗೇರಿ ಯವರಿಗೂ ಸಕಾಲಕ್ಕೆ ಮುದ್ರಿಸಿಕೊಟ್ಟ ವಿಜಯ ಮುದ್ರಣಾಲಯದ ಒಡೆಯ ರಾದ ಶ್ರೀ. ಹೊಸಕೇರಿ ನಾರಾಯಣರಾಯರಿಗೂ ನಾವು ಋಣಿಯಾಗಿದ್ದೇವೆ. ಮತ್ತು ಚಂದಾದಾರರಾಗಿ ಪ್ರೋತ್ಸಾಹಿಸಿದ ತಮ್ಮನ್ನು ಅಭಿನಂದಿಸಿ. ಇತೋಪ್ಯತಿಶಯವಾದ ಪ್ರೋತ್ಸಾಹನೆಯನ್ನು ಹಾರಯಿಸುವ

ಧಾರವಾಡ
೧೮–೪–೪೭

ತಮ್ಮ
**ಬಾಲಚಂದ್ರ ಘಾಣೇಕರ**
ಸಂಪಾದಕ

# ಪರಿವಿಡಿ




ಪ್ರಕಾಶಕರು :

ಬಾಲಚಂದ್ರ ಘಾಣೇಕರ, ಸಮಾಜ ಪುಸ್ತಕಾಲಯ, ಧಾರವಾಡ

ಮುದ್ರಕರು :

ಎನ್. ಎಸ್. ಬೆಂಗೇರಿ, ವಿಜಯ ಮುದ್ರಾಲಯ, ಧಾರವಾಡ

# ವಶೀಕರಣ



## ಪಾತ್ರಗಳು

೧. **ಕೃಷ್ಣರಾಯ** (ಭೋಗಿ)
೨. **ಸುಬ್ಬಕ್ಕ** (ರಾಯರ ಹೆಂಡತಿ, ರೋಗಿ)
೩. **ಲಕ್ಷ್ಮಿಬಾಯಿ** (ಸುಬ್ಬಕ್ಕನ ತಾಯಿ)
೪. **ನರಸಪ್ಪಾಚಾರಿ** (ದೇವರ ಪೂಜೆ ಬ್ರಾಹ್ಮಣ)
೫. **ನಾಗೇಶಭಟ್ಟ** (ಭೂತಗಳ ಸರ್ಕಸ್ ಮ್ಯಾನೇಜರ್)

[ಕೃಷ್ಣರಾಯರ ಮನೆ. ರಾತ್ರಿ ೧೦ ಗಂಟೆ ಮೀರಿದೆ. ಸುಬ್ಬಕ್ಕ ಬಳಲಿದ ಕೂಸನ್ನು ತೊಡೆಯ ಮೇಲೆ ಮಲಗಿಸಿಕೊಂಡು ಗೋಡೆಗೆ ಆತು ನಿದ್ರೆಮಾಡುತ್ತಿದ್ದಾಳೆ. ಲಕ್ಷ್ಮಿಬಾಯಿ ಮೆಣಸಿನಕಾಯಿ ಚಿವುಟುತ್ತಿದ್ದಾಳೆ. ನರಸಪ್ಪಾಚಾರಿ ಒಳಗೂ ಹೊರಗೂ ತಿರುಗಾಡುತ್ತ ಹೊಟ್ಟೆ ಹಸಿದಂತೆಲ್ಲಾ ನಶ್ಯವನ್ನು ತಿನ್ನುತ್ತಿದ್ದಾನೆ, ಮಾಗಿ ಸಿಂಪ.]

**ಲಕ್ಷ್ಮು**:— ರಾತ್ರಿ, ಊಟಕ್ಕೇನಾದರೂ ಬರೋದಿಲ್ಲಾ ಅಂತ ಹೇಳಿ ಹೋದ್ನೇನು ನಿನ ಗಂಡ? .... ...ಸುಬ್ಬೀ! ........ ಸುಬ್ಬೀ....ಏ ಸುಬ್ಬೀ!

**ಸುಬ್ಬ**:— (ಬೆಚ್ಚಿ ಬಿದ್ದು) ಆ!

**ಲಕ್ಷ್ಮು**:— ನಿದ್ದೇನೆ ಸುಬ್ಬಿ ಆಗಲೇ, ದೀಪಾ ಹಚ್ಚಿದ ಕೂಡ್ಲೆ ಕಣ್ಣೇ ಮುಚ್ಚೇಯಲ್ಲೆ? (ಕೂಸು ಅಳುವುದು) ಕೂಸಿನ್ನ ತೊಟ್ಲದಾಗರ ಹಾಕು. ಮಕ್ಳ ಯೋಚನಿ ನಿನಗಿಲ್ಲ. ಮನಿ ಯೋಚನಿ ನಿನ ಗಂಡಗಿಲ್ಲ. ಯಲ್ಲಾ ಈ ಸಂಸಾರದ ಸಂಭ್ರಮ ನನಗೇ ಹತ್ತ್ಯದೆ. ಏಳು, ಕೂಸಿನ್ನ ತೊಟ್ಲದಾಗ ಹಾಕು, ರುಬ್ಬೀನಿ.

**ಸುಬ್ಬ**:— (ಏಳಲು ಹವಣಿಸುತ್ತ) ಐ! ಐಯ್ಯಯ್ಯಯ್ಯ. ಇನ್ನೇನು ಏಳ್ತೇನವ್ವಾ, ಕಾಲು ಜೋಮು ತುಂಬಿ ಕಟಗೀ ಕಾಲಾಗ್ಯಾವ (ಕೂಸು ಹೆಚ್ಚು ಅಳುವುದು) ಇದು ಬ್ಯಾರೆ ಚೀರಿಕೋತದ.

**ಲಕ್ಷ್ಮು :-** ನೂರು ಹಡದ ಘಾಂಟಾರಿ ಆಗೀದವ್ನ ನೀನು ಒಂದಕ್ಕ. ಯಯ್ಯಯ್ಯೋ! ಗಂಟ್ಲು ಹರಕೋತದಲ್ಲೀ, ಒಂದೇಸವನೆ. ನನಕೈಯ್ಲೀ ಮೇಣ ಒನಕಾಯಿ ಚಿಪ್ಪುಟೀನಿ. ಹೊರಗ್ಯಾರೂ ಇಲ್ಲೇನೇ? ಊಟದ್ಹೊತ್ತಿಗೆ ಹಾಜರೀ ಹಾಕಿಪ್ರ ಒಂದು ಉಪಕಾರ ಮಾಡಿದ್ದಾಗ ಆಗ್ತದ.

**ಸುಬ್ಬ :—** ಅಷ್ಟ ಸಾಕು ಬಿಡೆ, ನಾನೊಲ್ಲೆ ಮನ್ಸ್ಯಾಗಿದ್ದಾಗೇನು ಅವರು ಕೂಸಿನ್ಮತ್ತಿ ಉಬ್ಬಿತ್ತು ಬಟ್ಟ ಮುದ್ದು ಸುರಸೋದು ಅಷ್ಟ್ರಾಗ ಅದ. ಸುಡಗಾಡು ಹೊಸ ಅಕ್ಕೀ ಕಳಿಸಿ ಅನ್ನ ಮುದ್ದಿ ಆಗ್ಯದ ಅಂತ ನನ್ನ ಹೊಡಿಯೋದು, ನಾಸಳೋದಕ್ಕ ಕೂಸು ಅತ್ತರೆ ಯಾಕಳಸ್ತಿ ಅಂತ ಕೂಸಿನ್ನ ನನ್ನ ಕೂಡಾ ಹೊಡದು ಎಲ್ಯಾಗ ಕೈ ತೊಳಕೊಂಡು ಯಡಗೈಯಾಗ ಅಂಗಿ ಹಿಡಕೊಂಡು ಹೊರಗೆ ಹೋಗೋದು—ಆವರು ಇಲ್ಲಂತ ಹೇಳಾಪ್ತಾಳೆ.

**ಲಕ್ಷ್ಮು :—** ಅಷ್ಟ ವೈಸ ಇಟುಗೊಂಡೀದಿ ನೀನು ನಿನ ಗಂಡನ್ನ (ಕೂಸು ಅಳುವನ್ನು ಚೀರುವ ಸ್ಥಾನಕ್ಕೆ ಏಗಿಸುವುದು). ಸತ್ತಗಿತ್ತೀತ, ಹೊರಗಾದ್ರೂ ನೋಡ್ಲೇನು............ಆಹಾ ಇಲ್ಲೀ ಕುಕ್ಕುರಿಶಾರಲ್ಲ ತೊಲ್ಪಾ ಲಕ್ಕೀ ಹಾಗೆ ಗೊಣಗೊಸ್ತು ವಿಮಾನದಾಗ ಕೂತ ಐನೋರ್ಹಂಗ. ಆಚಾರೀ ಆಚಾರ್ರೀ........ಏ ಆಚಾರ್ರೀ!

**ನರ :—** (ಚೀತರಿಸಿಕೊಂಡು) ಆ

**ಲಕ್ಷ್ಮು :—** (ಆವೇಶದಿಂದ) ಭಾಳ ನೆಟ್ಟಗಾತು ಹಣೇಬಾರ! ನಿದ್ದೇನು ಬಿಸ್ತಾಕಿಗ? ಧನುರ್ಮಾಸದ ಹುಗ್ಗಿ ಮುಬ್ಬು ಕಾದದೊ ಏನ ಮಣ್ಣು. ಯಯ್ಯೋ, ಒಂದೇಸವನ ಕೂಸೂ ಗಂಟ್ಲು ಹರಕೊಂಡು ಸಾಯ್ತದ, ನಿಮಗ ನಿದ್ದ್ಯಾರ ಹ್ಯಾಂಗ ಹತ್ತಿತೋ ಅಂತೀನಿ.

**ನರ :—** (ಆಕಳಿಸಿ ನಸ್ಯವನ್ನೇರಿಸುತ್ತಾ) ಒಂದೇಸವನೆ ಕೂಸು ಗಂಟ್ಲು ಹರಕೊಂಡು ಸಾಯ್ತದ, ನಿದ್ದ್ಯಾರ ಹ್ಯಾಂಗ ಹತ್ತಿತು ಅಂತೀನಿ ಅಂತ ಅಂದ್ರೇನು ಲಕ್ಷ್ಮುಂಬಾಯಿ? ನಿದ್ಯಲ್ಲ, ನಿದ್ದಲ್ಲ. ಹ್ಯಾಂಗ ಜೋಮು. (ಆಕಳಿಸಿ ಬಾಯಿಯ ಮುಂದೆ ಬೆರಳುಗಳಿಂದ ಚಿಟಿಗಿ ಹೊಡೆದು) ಸುಬ್ಬಕ್ಕೋರ ಮನಾಗಿಲ್ಲೇನು?

**ಲಕ್ಷ್ಮುಂ:—** ಮನ್ಸ್ಯಾಗ ಪ್ರತ್ಯಕ್ಷ ಆಗ್ಯಾಳ, ಎಲ್ಲಿ ಸುಡುಗಾಡಿಗೆ ಹೋಗಂತೀರಾಕಿನ್ನ? ಆಕೀಗ ಕಾಲು ಜೋಮು ಹತ್ಯಾವ, ನನ ಕೈಯೇ ಮೇಣಸಿನಕಾಯಿ ಚಿಪ್ಪುಟೀನಿ, ಕೂಸು ಚೀರಿ ಚೀರಿ ಪ್ರಾಣಾ ಬಿಡ್ತದ.

ಒಂದಿಷ್ಟು ಕೂಸಿನ್ನ ಎತಿಗೊಂಡ್ರೇನು. ನಿಮ್ಮ ಕೈ ಬಿದ್ದೋಗೋದಿಲ್ಲ. (ಆಚಾರ್ಯರು ನಕ್ಕುವನ್ನೇರಿಸುವರು) ಎದ್ದಾಗ ನಿದ್ದ್ಯಾಗ ಕೂಡಾ ಘಡಿ ಘಡಿ ಪ್ರುಡಿ ಮೂಗಿಲೆ ಮುಕ್ತೀರಲ್ಲಾ !

**ನರ:**— ( ಮೈಮುರಿದು, ಕಾಲು, ಕೈ, ಬೆರಳು, ಚಟಪಟ ಎನಿಸಿ ) ಎದ್ದಾಗ, ನಿದ್ದ್ಯಾಗ ಕೂಡಾ ಪಡಿ ಪಡಿ ಪ್ರುಡಿ ಮೂಗಿಲೆ ಮುಕ್ತೀರಲ್ಲಾಂತ ಅಂದ್ರೇನು ಲಕ್ಕ್ಯಂಬಾಯಿ. ಇಷ್ಟ, ಇಷ್ಟ ಅಭ್ಯಾಸ, ರಂಡೇದು ಅಭ್ಯಾಸ. ಇಷ್ಟ ದಿದ್ದರೆ ಮೂಗು ಕಟ್ಟುದ.

**ಲಕ್ಷುಂ:**— ( ಅಕ್ಕಸದಿಂದ ) ಇಲ್ಲ ಹೋಗರಿ, ಕೂಸಿನ್ನ ಎತ್ತಿಗೊಳ್ರಿ ಮೂಗು ಕಟ್ಟದ, ಕಿವಿ ಕಟ್ಟದ, ಎನಾದ್ರೇನು, ಅನ್ನ ಅಂತೂ ಕಟ್ಟಾಂಗಿಲ್ಲ ನಿಮಗೆ-- ಕುರುಡ ಬೆಕ್ಕು ಹಾರಿದ ಅಷ್ಟು ಎಗರಿಸ್ತೀರಿ.

**ನರ:**— ( ತನ್ನಲ್ಲಿಯೇ ) ದೇವರಪೂಜೇ ಬ್ರಾಹ್ಮಣನೋ ಕೂಸಿನ್ನಾಡಿಸೋ ಬ್ರಾಹ್ಮಣನೋ ನಾನು. ನಂಗ ಗೊತ್ತಿಲ್ಲದ್ದಾಗ ಆಗ್ಯದ. ಒಳ್ಳೇ ಹುಟ್ಟಿ ದಾಲೀ ಲಕ್ಷುಂಬಾಯಿ !

**ಲಕ್ಷುಂ:**— ಸುಬ್ಬೀ.

**ಸುಬ್ಬು:**— ಎದ್ದೀನವ್ವಾ.

**ಲಕ್ಷುಂ:**— ಏನು ಎದ್ದೀವಿ. (ಮೆಲುದನಿಯಲ್ಲಿ) ಮನ್ನೆ ಶನಿವಾರದ ಕ್ಯಾಪೀ ಹನಮಪ್ಪನ ಗುಡ್ಯಾಗ ನೋಡೇನು? ಆಕಿ ಬಂದಿದ್ದು.

**ಸುಬ್ಬು:**— ಯಾರೇ ?

**ಲಕ್ಷುಂ:**-- ಯಾರೆ? ನೀನಂತೂ ಶುದ್ಧ ಮಂಕು ನೋಡು....ಆಕಿ.... ನಿನ ಗಂಡನ ಮೇನಕಿ !

**ಸುಬ್ಬು:**-- ನಾನು ಯಾರನ್ನೂ ಅರಿಯೆ. ನಮ್ಮವ್ವ. ಆ ಮಂದ್ಯಾಗ ತೂರಿ ತೀರ್ಥ ತೊಗೊಂಡು ಬರೋವ್ರೊಳಗ ಸತ್ತು ಮತ್ತ ಹುಟ್ಟಿದ್ದಾಂಗ ಆತು....ಅದ್ರ್ಯಾಗ ಒಂದನೇ ಇತ್ತೂ ಅಂತ ಒಂದಿಷ್ಟು ತೀರ್ಥನರ ಒದಾನ ಕಂಡೆ....ಯಾರು? ನೀ ಅಂಜೋದು ಮಕ್ಕಾಸಾನಿ ಮಗಳು ಬಂದಿದ್ಲೇನು?

**ಲಕ್ಷುಂ :**— ಹೂ ಬಂದಿದ್ಲು, ಮಕ್ಕಾಸಾನಿ ಮಗಳು. ನನ ಮುಗ್ಗಾಗ ನಿಂತಿದ್ಲು. ಆಕೀಗೇನ ನನ ಸರಿ ಮಾತು ? (ಅಣಕಿಸುವಂತೆ) " ಸುಬ್ಬಕ್ಕನ ಕೂಸು ಛಂದಾಗದೇನ್ರೀ ಲಕ್ಷ್ಮಕ್ಕಾ " ಅಂತಾಳ ಹುಬ್ಬು ಹಾರಿಸಿ ಕೇಳಿದ ಳ್ಳು ಉರಿತು ನನಗ ಹಂಗ. ಸುಬ್ಬಕ್ಕನ ಗಂಡ ಛಂದಾಗಿದ್ದಾನ ಅಂದೆ.

**ಸುಬ್ಬ:**— ( ಗಾಬರಿಯಿಂದ ) ಹಾಗ್ಯಾಕ ಅಂದೆವ್ಮಾ ಅಕೀಗೆ? ಅವರಿಗೆ ತಿಳಿತೂ ಅಂದ್ರೆ........

**ಲಕ್ಷ್ಮಂ:**— ಹೀಗ ಹೆದರಿ ಹೆವರೀ ತಲಿಗೇರಿಸಿಕೊಂಡೀವಿ ಅಕೀ ಫೀಥಾರ್ ತೊಗೋಬೇಕಾದ್ರೆ ಕೈನೋಡ್ತೀನು?....ಕೆಂಪ್ಗುರಳಿಂದು, ಕಳಾವರ್ ಮಾಟಿದ್ದು, ಮನ್ನೆ ಅರ್ಜುನಾಚಾರೀ ಸರಿ ಮಾಡ್ಸಿದ್ದು—

**ಸುಬ್ಬ:**—ಹೌದವ್ಮ ಘೊಲೀ ನೆ ಂಪವ, ಅವೇ ಸುಡಗಾಡು ಉಂಗ್ರ. ಇನ್ನೂ ಬೆನ್ನಾಗ ಒಂದ್ಸಾಡಿ ಸೂಲಿ ಉಳಿದೀ ಇದೆ ನೀನು ಕೇಳೂ ಅಂದೀ ಅಂತ ಕೇಳಿ ದನಾ ಬಡಿಸಿಗೊಂಡ್ಹಾಗ ಬಡಿಸಿಗೊಂಡ್ನೆಲ್ಲಾ.

**ಲಕ್ಷ್ಮಂ:**— ಹೂ, ಹೂ, ಅದೇ ಉಂಗ್ರ. ಅದಾಕೀ ಕೈಯಾಗ ಯಾಕ? ಪ್ಯೆಗೊಂದು ಕೋಲಿಗೊಂದು ಮಡಿಸೀರಿ ಬಿಟ್ಟು ಬ್ಯಾರೀ ಕಂಡಿಲ್ಲಾ ನಿನ್ನ ಹಣೇಬರ.

**ಸುಬ್ಬ:**— ನನ್ನ ಹಣೇಬರ ಮತ್ತೆ, ಅದಕ್ಕೇನು ಮಾಡ್ಬೇಕು? ಅಪ್ಪನ್ನ ಕೇಳ್ಳೇನು ಯಾಕೊಟ್ರಿ ಅಂತ?

**ಲಕ್ಷ್ಮಂ:**— ಹಿಡದು ಕೇಳ್ಬೇಕು. ಯಾಕ ಕೇಳ್ಬಾರದೂ ಅಂತೀನಿ. ಯಾಕ್ರೀ ನರಸಪ್ಪಾಚಾರೀ ಏನಂತೀರಿ?

**ನರ:**— ಯಾಕ್ರೀ ನರಸಪ್ಪಾಚಾರೀ ಏನಂತೀರೀ ಅಂದ್ರೇನು ಲಕ್ಷ್ಮಂ ಬಾಯರೆ, ಯಾಕ್ರಿ ನರಸಪ್ಪಾಚಾರ ಏನಂತೀರಿ ಅಂತಾ ಯಾವದಕ್ಕಂದ್ರಿ?

**ಲಕ್ಷ್ಮಂ:**— ಯಾವದಕ್ಕಾದೂ ಆಗ್ಲಿ, ತಪ್ಪಿದ್ದವರ್ನ ಯಾಕ ಹಿಡದು ಕೇಳಬಾರದೂ ಅಂತೀನಿ.

**ನರ:**— ತಪ್ಪಿದ್ದೋರ್ನ ಯಾಕ ಹಿಡದು ಕೇಳಬಾರದು ಅಂತೀನಿ ಅಂತ ಅಂದ್ರೇನ್ರಿ ಲಕ್ಷ್ಮಂಬಾಯಿ, ಓಹೋ, ಯಾಕ ಕೇಳಬಾರ್ದು ಘೊಲೋ ಕೇಳ್ಬೇಕು.

**ಸುಬ್ಬ:**— ಕೇಳ್ರೀ ಹಾಂಗಾರ ನೀವೇ ಅವರ್ನ ಈಗ ಬರ್ತಾರಲ್ಲ.

**ನರ:**— ಕೇಳ್ರಿ ಹಂಗಾರ ನೀವೆ ಅವರ್ನ ಈಗ ಬರ್ತಾರಲ್ಲ ಅಂತ ಅಪವೇನ್ರಿ ಸುಬ್ಬಕ್ಕಾ. ಯಾರೂ ಅಂದ್ರಿ, ಯಾರೀಗ ಬರ್ತಾರ?

**ಸುಬ್ಬ / ಲಕ್ಷ್ಮಂ:**— ಇನ್ನ್ಯಾರಿನ್ನಾ ನಿಮ್ಮ ಗ್ರೇಸ್ಥನಾರ್.

**ನರ :—** ಇನ್ನ್ಯಾರಿನ್ನ್ಯಾ, ನಿಮ್ಮ ಗ್ರೇಸ್ಫುಲ್ನೆಸ್ ಅಂತಾ ಅಂದ್ರೇನ್ರಿ ಸುಬ್ಬಕ್ಕಾ ಲಕ್ಷ್ಮಂಬಾಯರೇ (ಆಶ್ಚರ್ಯ) ಯಾರನ್ನ ? ಕ್ರಿಷ್ಣ್ಯಾಯರ್‍ನ್ನಾ ! ಅವರೇನಂಥಾ ತಪ್ಪು ಮಾಡ್ಯಾರ್ರೀ ?

**ಲಕ್ಷ್ಮು :–** ಛೀ, ಛೀ, ಪಾಪ, ನಾನು ಮಾಡೀನಿ ತಪ್ಪು. ಆ ಕೆಂಪು ಹರಳಿನ ಉಂಗ್ರ ಒಯ್ದು ಮುಕ್ಯಾಸಾನಿ ಮಗಳಿಗೆ ನಾನು ಕೊಟ್ಟೇನಲಾ ?

**ನರ :—** ಆ ಕೆಂಪು ಹರಳಿನ ಉಂಗ್ರ ಒಯ್ದು ಮುಕ್ಯಾಸಾನೀ ಮಗಳಿಗೆ ನಾನು ಕೊಟ್ಟೇನಲ್ಲಾ ಅಂತ ಅಂದ್ರೇನು ಲಕ್ಷ್ಮಂಬಾಯಿ. ಛೆ ಛೇ, ನೀವ್ಯಾಕೊಟ್ಟೇರಿ ಪಾಪ. ರಾಯರದ ಈ ಕೆಲಸ.

**ಸುಬ್ಬ :—** ಕೇಳ್ರಿ ಹಂಗಾರ, ಅವರು ಬಂದ ಮ್ಯಾಲೆ ಛಲೋ ಕೇಳ್ಬೇಕು ಅಂದ್ರೆಲ್ಲಾ.

**ನರ :—** ಉಶ್ ಉಶ್ ರಾಯ್ರು ಬಂದೇ ಬಂದ್ರು.

**ಕ್ರಿಷ್ಣ :—** (ಪ್ರವೇಶಿಸುತ್ತ) ಏನೇ ಅದು, ಛಲೋ ಕೇಳೋದು ?

**ಲಕ್ಷ್ಮಿ :—** ಏನೂ ಇಲ್ಲ. ನೀವ್ಯಾಕ ಅಷ್ಟು ಸಿಟ್ಗೇಳ್ತೀರಿ ? ಸುಬ್ಬಿ ಏನೋ ಅಂದ್ಳು....

**ಕ್ರಿಷ್ಣ :—** (ದರ್ಪದಿಂದ) ಏನಂದ್ಳು. ಏನೇ, ಬೆನ್ನು ಏನಂತದ ?

**ಲಕ್ಷ್ಮಿ :—** ಆಕೇನು ಅನಬಾರದ್ದಂತಾಳ, ಇಷ್ಟೆ (ನರಸಪ್ಪಾಚಾರು ಅರ್ಥಗರ್ಭಿತವಾಗಿ ಕೆಮ್ಮುವರು ) ನಿಮ್ಮ........ಹಿರೇರ್‍ದು ದ್ವಾದಶೀನೋ, ತ್ರಯೋದಶೀನೋ ಅಂತ ಆಚಾರ್‍ರು ಅಂದ್ರು. ಅದಕ್ಕ ಸುಬ್ಬಿ ನಿಮ್ಮನ್ನೆ ಕೇಳ್ಬೇಕೂ ಅಂದ್ಳು.

**ಕ್ರಿಷ್ಣ:—** ದ್ವಾದಶೀನೂ ಇಲ್ಲಾ ತ್ರಯೋದಶೀನೂ ಇಲ್ಲಾ.

**ಲಕ್ಷ್ಮಿ :—** ಸತ್ತವರಿಗೆ ಅನ್ನನ ಹಾಕೋದಿಲ್ಲೋ ಏನ ಮಣ್ಣು ? ಮಾತಾಡ್ರೀ ನರಸಪ್ಪಾಚಾರ್ರಿ, ಬಾಯಾಗೇನು ಕಡುಬಿಟ್ಟುಗೊಂಡೀರೇನು.

**ನರ :—** ಬಾಯಾಗೇನು ಕಡುಬಿಟುಗೊಂಡೀರೇನು ಅಂತ ಅಂದ್ರೇನ್ರಿ ಲಕ್ಷ್ಮಂಬಾಯರೆ, ಇಲ್ಲ ಇಲ್ಲ, ಅಡಿಕಿ. ಅವರ್‍ಯಾಕ ಸತ್ತವರಿಗೆ ಪಿಂಡಾ ತಪ್ಸ್ಯಾರು ?

**ಕ್ರಿಷ್ಣ :—** ತಪ್ಪಸ್ತೀನಿ, ತಪ್ಪಸ್ತೀನಿ, ತಪ್ಪಸ್ತೀನಿ. ಸತ್ತವರಿಗೆ ಪಿಂಡಾ ಹಾಕಿ ಹಾಕೇ ಬದಿಕಿದೊರು ಪಿಂಡಿಲ್ದ್ಹಂಗ ಸಾಯೋದು. ಇರ್ಲೇಳ್ರಿ, ಈಗ ಸಧ್ಯ ಪಿಂಡದ್ಹೊತ್ತು ಆಗ್ಯಾದ.

೨

[ದೆವ್ವದ ನಾಗೇಶಭಟ್ಟರ ಮನೆ. ಗೋಡೆಗಾತುಕೊಂಡು ಭಟ್ಟರು ಕುಳಿತಿದ್ದಾರೆ. ಸಹಸ್ರ ಹಸ್ತಗಳುಳ್ಳ ಮಹಂಕಾಳಿಯ ಪಟವು ಗೋಡೆಗೆ ನೇತಾಡುತ್ತಿದೆ. ಭಟ್ಟರ ಮುಂಖವನ್ನೇ ದಿಟ್ಟಿಸುತ್ತಾ ಲಕ್ಷ್ಮಂಬಾಯಿ ಪಟ್ಕಾಸನವನ್ನು ಹೂಡಿ ಮುಂದೆ ಕುಳಿತಿದ್ದಾಳೆ. ಒಳಗೂ ಹೊರಗೂ ಓಡಾಡುತ್ತಾ ನಶ್ಯವನ್ನು ಎಳೆಯುತ್ತಿದ್ದಾನೆ ಸರಸಪ್ಪಾಚಾರಿ].

**ಲಕ್ಷ್ಮು:—** ನೀವಾರ ಒಂದಿಷ್ಟು ಅವರ ತಲಿ ಸದೆವಾಡಿ ಪುಣ್ಯಾ ಕಟಿಗೊಳ್ರಿಪ್ಪಾ ಕೇಳಿದ್ಕೊಡ್ತೀನಿ. ನನ್ನ ಮಗಳ ಸಂಸಾರ ಹರದು ಹಾಳಾಗಿ ಹಾದೀಗ ಹಂಚಿ ಮೂರಾಬಟ್ಟೆ ಆಗಿ ಹೋಗ್ಯಾದ.

**ನಾಗೇ:—** ಈಗ ಏನಾಗೆದ ಅಂತೀರಿ ಲಕ್ಷ್ಮಂಬಾಯರ್ರಿ?

**ಲಕ್ಷ್ಮು:—** ಏನಾಗ್ಯದ! ಏನಾಗಿಲ್ಲ ಈಗ? ಇನ್ನೇನ ಆಗ್ಬೇಕ್ರಿ? ಏನೇನು ಆಗ್ಬಾರ್ದ್ದೋ ಅದೆಲ್ಲ ಆಗ್ಯಾದ.... ಹಂಗ್ಯಾಕ ಕಾಲು ಸುಟ್ಟ ಬೆಕ್ಕಿನ ಹಂಗ ತಿರಗ್ಯಾಡ್ತೀರಿ? ಕುಕ್ಕರಸ್ರಿ ಆಚಾರ್ರೆ, ಹೇಳ್ರಿ ಯಲ್ಲಾ ಸಮಾಚಾರ ಭಟ್ರ ಮುಂದೆ, ಇಶದಿಶದಾಗಿ.

**ಸರ:—** ಹೇಳ್ರಿಯಲ್ಲಾ ಸಮಾಚಾರ ಭಟ್ರ ಮುಂದೆ ಇಶದಿಶದಾಗಿ ಅಂತ ಅಂದ್ರೇನು ಲಕ್ಷ್ಮಂಬಾಯ್ರು........... ಏನೂ ಇಲ್ಲ ಇಷ್ಟೆ........ ರಾಯ್ರು.... ನಮ್ಮ ರಾಯ್ರು.... ಇದ್ದಾರಲ್ಲ.... ಕ್ರಿಷ್ಣಾಪ್ರಯ್ರು ನಮ್ಮ ರಾಯ್ರ ಯುಜಮಾನಿ ಇದ್ದಾರಲ್ಲ.... ಯುಜಮಾನಿ ಸುಬ್ಬಕ್ಕ.... ಸುಬ್ಬಕ್ಕನ ಯುಜಮಾನ್ರು ಇದ್ದಾರಲ್ಲ.... ಸುಬ್ಬಕ್ಕ ಇವರ ಮಗಳಾಗ್ಬೇಕು.... ಇದ್ದಾರಲ್ಲ.... ಲಕ್ಷ್ಮಂಬಾಯರ್ಗೆ, ಇವರ ಗಂಡ ಇದ್ದಾರಲ್ಲ....

**ನಾಗೇ:—** ಯಾರ ಗಂಡ, ಯಾರಿಗೆ ಮಗಳಾಗ್ಬೇಕು, ಹಿಂಗ್ಯಾಕ್ರಿ ಸರಸಪ್ಪಾಚಾರ್ರಿ? ಸುಧಾರ್ಸಿಗೊಂಡು ಹೇಳ್ರಿ ಸ್ವಲ್ಪ........ ಸ್ವಲ್ಪ ನಶ್ಯ ಹಾಕ್ರಿಲ್ಲಿ.

**ಲಕ್ಷ್ಮು:—** ನೀವು ಸುಮ್ಮನೆ ಕುಕ್ಕರಸ್ರೀ ಆಚಾರ್ರಿ. ನಾನೆಲ್ಲಾ ಹೇಳ್ತೀನಿ. ನೋಡ್ರಿಪಾ, ಆಕೇನು ಬೂದೀನೇ ಉಗ್ಯಾಳೋ ಏನು ಮಾಡ್ಕೊಂಡು ನನ್ನ ಅಳಿಯಾಗ ಊರ ತುಂಬ ಅದೇನೋ ಪುಡಿ ಉಗ್ಗೋರು ಬ್ಯಾರೆ ಬಂದಾರಂತೆ ವೈಶ್ಯರ ಹುಡಗ್ಗೀನೋ ಉಗ್ಗಿದರಂತಲ್ಲ ಮನ್ನೆ,

ಹಾಗ.... ನನ್ನ ಅಳಿಯು ಮನಿ ಅನಕ ಸೇರೋದಿಲ್ಲ ಮನಿ ಖಾಲೀ ಮಾಡಿ ಆ ಮಕ್ಕಾಸಾನೀ ಮನಿ ತುಂಬ್ಲಿಕ್ಕೆ ಹತ್ತ್ಯಾನೆ.

**ನರ:**— ಹೂ ಅಷ್ಟೇ ನೋಡ್ರಿ ಇನ್ನೇನಿಲ್ಲ. ರಾಯ್ರುದ್ದಾರಲ್ಲಾ ರಾಯ್ರು. ಏ ವುತಿ ಕೇಳಿದ್ರಲ್ಲ? ಖಾಲೀ ಮಾಡ್ತಾರೆ... ಲಕ್ಷ್ಮಂಬಾಯರು. ಅಂದ್ಹಾಂಗ....

**ನಾಗೇ:** — (ನಗುತ್ತಾ) ತಿಳೀತು ಬಿಡ್ರೀ, ತಿಳೀತು, ವಶಿವಶೀಕರಣ ಯಂತ್ರಬೇಕು ಅನಬಾರ್ದೆರಾ.

**ಲಕ್ಷ್ಮು:**— ಹಾ ಅದ, ಅದೆ ನೋಡ್ರಿ ವಶೀಕರಣ.

**ನಾಗೇ:**— ಇಷ್ಟೆ ಹೌದೆಲ್ಲೋ, ನನಗ ಬಿಡ್ರಿ ಅದನ್ನ.

**ಲಕ್ಷ್ಮು:**— ಕೂಡೂ ಅಂದ್ರ ಕೂಡು, ಏಳೂ ಅಂದ್ರೆ ಏಳು ಆಗಬೇಗ ನೋಡ್ರಿ ನನ್ನ ಅಳಿಯು.

**ನಾಗೇ:**— ನನಗಬಿಡ್ರಿ ಅಂತೀನಿ, ನಾಯಿಮಾಡಿಕೊಟ್ಟಾತ್ರೋ ಇಲ್ಲ ನಿಮಗೆ.

**ಲಕ್ಷ್ಮು:**— ಹಾ ಸಾಕ್ರೆಪ್ಪಾ, ನನ್ನ ಅಳಿಯನ್ನೊಂದು ನಾಯೀ ಮಾಡಿ ಕೊಟ್ಟು ಪುಣ್ಯಾ ಕಟಿಗೊಳ್ರಿ.

**ನಾಗೇ:**— ನನಗ ಕೂಡಿತೂ ಅಂತೀನಿ? ನನಗ ಬಿಡ್ರಿ ಅದನ್ನ.

**ಲಕ್ಷ್ಮಿ:**— ಅದಕ್ಕೇನಾಗಬೇಕೂ?

**ನಾಗೇ:** — ಏನೂ ಬ್ಯಾಡ್ರೆವ್ವಾ, ನಿಮ್ಕಂದೇನ್ನೊತ್ತಗೊಳ್ಳಿ? ನಿಮ್ಮ ಮಗಳು ಅಳಿಯು ಸರಿಯಾಗಿರೋದು ನನಗೂ ಬೇಕು. ನೀವೇನ ಕೊಡೋದೂ ಬ್ಯಾಡ. ಮಹಾಕಾಳೀ ಪೂಜೀಮಾಡಿ ಮಂತ್ರಿಸಿ ಒಂದು ಯಂತ್ರ-ತಾಯಿತ- ಕಟ್ತೇನಿ ನಿಮ್ಮ ಮಗಳ ಯಡಗೈ ರಟ್ಟೀಗ. ನಿಮ್ಮ ಅಳಿಯ ಆಕೀ ಸೆರಗ ಹಿಡುಕೊಂಡು........

**ಲಕ್ಷ್ಮು:**— ಹಾ ಸಾಕ್ರೆಪಾ, ಪುಣ್ಯಾಕಟಗೊಳ್ರಿ. ಸುಬ್ಬಕ್ಕನ್ನ ನಿಮ್ಮ ಮಗಳು ಅಂದ್ಕೊಳ್ರಿ.

**ನರ:**—ಅಷ್ಟೇ, ಅಷ್ಟೆ, ಸುಬ್ಬಕ್ಕನ್ನ........ ಲಕ್ಷ್ಮಂಬಾಯೋರ ಮಗಳ ಸುಬ್ಬಕ್ಕಿದ್ದಾರಲ್ಲ ಅವರನ್ನಾ, ನಿಮ್ಮ ಮಗಳು ಅಂದ್ಕೊಳ್ರಿ ಯಾಕ್ರಿ ಲಕ್ಷ್ಮುಬಾಯೊರೆ?

**ನಾಗೇ**:— (ಗಂಭೀರವಾಣಿಯಿಂದ) ನಾಳಿನ ಭಾನುವಾರ ಅಮಾವಾಸಿ, ಸೂರ್ಯಗ್ರಹಣ, ಉತ್ತಮ ಯೋಗ. ಮಂಗಳ ಮೂರನೇ ಮನಿಯಲ್ಲಿದ್ದಾನೆ. ಯಂತ್ರ ಬರದಿಡ್ತೀನಿ; ರಾಮ ಬಾಣದಂಥಾದ್ದು. ರಾತ್ರಿ ಹನ್ನೊಂದ್ರ ಪ್ರಾಂತಕ್ಕೆ ತೆಗ್ಗಿನ ಗೋಕರಣೇಶ್ವರನ ಗುಡಿ ಪ್ರಾಕಾರದಾಗ ಇರ್ತೀನಿ. ಸುಬ್ಬಕ್ಕನ್ನ ಒಬ್ಬಾಕೀನ ಬಂದು ಗುಡಿ ಬಾಗಲಿಗೆ ಹರಳ ಎಸಿ ಅನ್ರಿ.

**ಲಕ್ಷ್ಮು**:— ತಿಳೀತು ಬಿಡ್ರಿ, ಆತು ಕಳಸ್ತೀನಿ. ನಿಮಗೇನರ?

**ನಾಗೇ**:— ಛೇ. ಛೇ, ಏನೂ ಬ್ಯಾಡ ಹೋಗ್ರಿ, ನಿಮ್ಮಿಂದ ಕೂಡಾ ಸಡ್ತ್ತ ತೊಗೊಂಡ್ರೆ........ಕಾಳಿಕಾಪೂಜೀ ಮಾಡಿ ಕುರೀ ಕೊಯಿಸಲಿಕ್ಕೆ ಒಂದು ಇಪ್ಪತ್ತೈದು ರೂಪಾಯಿ, ಆ ಬೆಳ್ಳಿ ತಗಡಿಗೆ ಒಂದು ಐದು ರೂಪಾಯಿ, ಒಟ್ಟು ಮೂವತ್ತೈದು ರೂಪಾಯಿ ನರಸಪ್ಪಾಚಾರ ಸರಿ ಕಳಸ್ರಿ.

**ಲಕ್ಷ್ಮು**:— ಹಾಗಾದ್ರ ನಾ ಬರ್‍ಲ್ಯಾ? ಹಾಂಗ ಮಾಡ್ರಿ ಸುಬ್ಬಕ್ಕನ ಸಂಸಾರ ಮಾತ್ರ....

**ನಾಗೇ**:— ನನ್ನ ಕಲಿತು ಅಂದ್ನೆಲ್ಲಾ ನನಗ ಬಿಡ್ರಿ ಅಂತೀನಿ.

೩

[ ಕ್ರಿಷ್ಟರಾಯರ ಮನೆ. ರಾತ್ರಿ ಮಳೆ ಹೆಚ್ಚಾಗಿ ಬಂದದ್ದರಿಂದ ರಾಯರು ಮನೆಯಲ್ಲೇ ಮಲಗಿ, ನಿದ್ರೆ ಬಾರದೆ ಮಂಚದ ಮೇಲೆ ಹೊರಳಾಡುತ್ತಿದ್ದಾರೆ ಕೆಳಗೆ ಹಾಸಿಗೆ ಮೇಲೆ ಸುಬ್ಬಕ್ಕ ಕೂಸಿನೊಂದಿಗೆ ಮಲಗಿ ನಿದ್ರೆಯಲ್ಲೇ ಕನವರಿಸುತಿದ್ದಾಳೆ. ಚಿಕ್ಕ ದೀಪ ಒಂದು ಕುಣಿಯುತ್ತಿದೆ. ]

**ಸುಬ್ಬ**:— (ಬಡಬಡಿಸುವಳು) ಛಲೋ ನೆನದದ ಅದ........ ಆ ಹಾಳುಂಗ್ರ ಇನ್ನೂ ಒಂದ್ಸಾರಿ ಟೆನ್ನಾಗ ಸೂಲಿ ಉಳದೇ ಅದ.

**ಕ್ರಿಷ್ಟ**:— ಏನದು ?

**ಸುಬ್ಬ**:— ದನ ಬಡಿಸಿಗೊಂಡ್ಹಾಗ ಬಡಿಸಿಗೊಂಡ್ನೆಲ್ಲಾ ಅದರ ಕಾಲಾಗ.

**ಕ್ರಿಷ್ಟ**:— ಓಹೋ ಕನವರಿಸ್ತಿದ್ದಾಳೇನು!

**ಸುಬ್ಬ**:— ನನಗೂ ಕೆಟ್ಟ ಕಾಲ ಕಡಿ ಆದುವು. ಇನ್ಯಾಕ ಅದನ್ನೆಲ್ಲ ನೆನಸಿಗೊಂಡು ಅಳ್ಳಿ? (ನಗುವಳು).

**ಕ್ರಿಷ್ಟ**:— ಏನೋ ಸ್ವಾರಸ್ಯ ಅದೆ.

**ಸುಬ್ಬ**:— ದೇವ್ರು, ಹಾದೀ ತೋರ್ಸ್ಲೀ ತೊರಸ್ತಾನೆ. ಇಷ್ಟು ದಿವ್ಸಂತೂ ಕಣ್ಣೀರ್ಲ್ಲಿ ಕೈತೊಳದೆ, ಈಗ ನನ್ನ ಪಾಲಿಗೆ ದೇವರು ಕಣ್ಣು ತಗದ.

**ಕ್ರಿಷ್ಟ**:— ಏನು ಕಣ್ಣು ತಗದನಪಾ ದೇವುರು ಈಕೀ ಪಾಲ್ಗೆ ಈಶ್ವರ ಈಕೀ ಮ್ಯಾಲೆ ಅಂತಃಕರುಣ ಮಾಡಿದ್ರೆ ಮೂರನೇ ಕಣ್ಣು ತಗೀಬೇಕು ಅಷ್ಟೆ.

**ಸುಬ್ಬ**:— ಅವರೇನು ಕಾದ್ಕೊಂಡು ಕೂತಿರ್ತಾರೇನು ಅನುಗಾಲ, ಹೋಗಿ ಆಕೀ ಮನ್ಸ್ಯಾಗ ಬಿದ್ದಿರ್ತಾರೆ.

**ಕ್ರಿಷ್ಟ**:— ಬಿದ್ದಿರ್ತಾರೆ!

**ಸುಬ್ಬ**:— ಕೂಸಿನ್ನ ಮಲಿಗಿಸಿ ರಾತ್ರಿ ಹನ್ನೊಂದೇನು ಹನ್ನೆರಡೇನು ಹೋಗ್ತಿನಿ. ನನ್ನ ಪಾಲ್ಗೆ ಅವರೇ ದೇವ್ರು. ಬಾ ಅಂತ ಹೇಳ್ಯಾರಲ್ಲ, ತೆಗ್ಗಿನಾಗಿನ ಗೋಕರಣೇಶ್ವರನ ಗುಡಿಗೆ.

**ಕ್ರಿಷ್ಟ**:— ಏನು ಗೋಕರಣೇಶ್ವರನ ಗುಡಿಗೆ. ರಾತ್ರಿ ಹನ್ನೊಂದು ಘಂಟೇಗೆ!

**ಸುಬ್ಬ**:— ಮೊನ್ನೆ ಸೋಮವಾರ ನೋಡೀನಿ. ಆ ಗುಡಿಗೆ ತಗಡಿನ ಬಾಗ್ಲದ. ಬಾಗ್ಲಿಗೆ ಯಾಡ ಹಳ್ಳೆಸದರೆ ಬಾಗಿಲ ತಗಿತೀನಿ ಅಂತ ಹೇಳ್ಯಾರಲ್ಲಾ (ನಗುವಳು).

**ಕ್ರಿಷ್ಟ**:— ಓಹೋ ಹೀಂಗೊ ಸಮಾಚಾರ! ಇಲ್ಲೀತನಕಾ ಬಂದೀಯಾ? ನೀನು ದೊಡ್ಡ ಅರುಂಧತಿ ಅಂತ ತಿಳಿದು ಬಿಟ್ಟಿದ್ದೆ ನಿನ್ನ ಸಿನ್ನ. ಕೊಂದು ಬಿಡ್ತೀನಿ ಈಗ. ಏನೂ ಸಿಗವಲ್ದಲ್ಲಿಲ್ಲ. [ ಕೂಸು ಅಳುವದು ]

**ಸುಬ್ಬ**:— ಯಾಕ ಚೀರತದ ಇದು (ಭಯದಿಂದ ಅಯ್ಯೊ! ಇದೇನು ಟ್ರಂಕ್ಯಾಕ ಹೊತೊಗೊಂಡು ನಿಂತಾರಿವ್ರು!

**ಕ್ರಿಷ್ಟ**:— ಯಾಕ ಆ....

**ಸುಬ್ಬ** :— ಅಯ್ಯೊ ಅಯ್ಯೊ.

**ಕ್ರಿಷ್ಟ** :— ಬಿಡು ಕೈಬಿಡು, ನಿನ್ನ ಕೊಂದು ನಾ ಗಲ್ಲಾಗ್ತೀನಿ.

**ಸುಬ್ಬ** :— ಅಯ್ಯೊ ಅಮ್ಮಾ (ಚೀರುವಳು).

**ಲಕ್ಷ್ಮು** :— ಆಚಾರ್ರೇ..........ಅಯ್ಯೋ ಸುಬ್ಬಿ ಚೀರತ್ತಾಳೆ.

**ಕ್ರಿಷ್ಟ** :— ಹೂ ನಡಿ, ನಡಿ, ನನ್ನನಿ ಬಿಟ್ಟು ನಡಿ ಅಂತೀನಿ.

**ಲಕ್ಷ್ಮಿ:** ಏನನಾಹುತವಾಯ್ತು ಇದು. ಅಯ್ಯೋ ಟ್ರಂಕು ಆಕೀ ತಲೀ ಮ್ಯಾಲೆ ಹಾಕ್ತಾರ ಇವ್ರು! ಆಚಾರ್ರೆ ಆ ಟ್ರಂಕು ಇಸಗೊಳ್ರಿ.

**ನರ:**— ಆಚಾರ್ರೆ ಆ ಟ್ರಂಕು ಇಸಗೊಳ್ರಿ ಅಂತ ಅಂದ್ರೇನ್ರಿ ಲಕ್ಷ್ಮೀಬಾಯೋರ, ಹೌದು ಅಂದ್ಹಾಂಗ ರಾಯ್ರು ತೊಗೊಂಡಾರಲ್ಲ ಟ್ರಂಕು! ಆ ಟ್ರಂಕು ನಾ ಒಯ್ತೀನ್ರಿ. ತರ್ರೀ ರಾಯ್ರು. ಎಲ್ಲಿಗೆ ವೈಬೇಕು? (ನಸ್ಯವನ್ನು ಹಾಕುತ್ತ) ಹೂ ತರ್ರಿ.

**ಕ್ರಿಷ್ಣ:**— ನಡಿ ಮನಿ ಬಿಟ್ಟು ನಡಿ, ನಡಿ, ನನಗ ಮಾರೀ ತೋರ್ಸಬ್ಯಾಡ.

**ಲಕ್ಷ್ಮಿ:**— ಏನು ಮಾಡ್ತ್ಯಾಳ ಆಕೀ? ಎಲ್ಲಿ ಹೋಗಂತೀರಾಕೀನ್ನ?

**ಕ್ರಿಷ್ಣ:**— ಇನ್ನೆಲ್ಲಿಗೆ ಹೋಗ್ಲಿ, ಗೋಕರಣೇಶ್ವರನ ಗುಡಿಗೆ.

**ನರ:**— ಇನ್ನೆಲ್ಲಿಗೆ ಹೋಗ್ಲಿ ಗೋಕರಣೇಶ್ವರನ ಗುಡಿಗೆ ಅಂದ್ರೇನ್ರಿ ರಾಯ್ರು, ಇವತ್ತಲ್ಲ್ರೀ ಅದು ಅಮಾವಾಸ್ಯೆ. ಬರೋ ಭಾನುವಾರ ಅಲ್ಲೇನ್ರೀ ಲಕ್ಷ್ಮೀಬಾಯೋರ ಅವರು ಬಾ ಅಂತ ಹೇಳಿದ್ದು? ಅವತ್ತು ಅವರು ವಶೀಕರಣದ್ದಾಯ್ತು ಕಪ್ಪೀನಿ ಅಂದದ್ದು?

**ಕ್ರಿಷ್ಣ:**— ವಶೀಕರಣ! ವಶೀಕರಣೇ!! ನನಗ ವಶೀಕರಣ!!! ಹಣೇಬಾರ!!! (ಹಣೆಬಡಿದುಕೊಳ್ಳುವನು).

---

# ಏಕೋದರರು

## ಪಾತ್ರಗಳು

೧. **ಶೇಷಗಿರಿರಾಯ** (ಹಿರಿಮಗ)
೨. **ರಾಮಚಂದ್ರ** (ಕಿರಿಮಗ)
೩. **ತಂದೆ**
೪. **ತಾಯಿ**
೫. **ವಾರದ ಹುಡುಗ**

ಮನೆಯ ಹೊರಬಾಗಿಲ ಮುಂದೆ ಅಂದರೆ ರಸ್ತೆಯಲ್ಲಿ. ಮಧ್ಯಾಹ್ನ ೨ ಗಂಟೆ ಸಮಯ. ಶೇಷಗಿರಿರಾಯರ ಗೋಪಾದವಷ್ಟು ಜುಟ್ಟು ರಾಮಚಂದ್ರನ ಮುಷ್ಟಿಯಲ್ಲಿ; ರಾಮಚಂದ್ರನ ಕ್ರಾಪು ಶೇಷಗಿರಿರಾಯರ ಕೈಯಲ್ಲಿ. ಇಬ್ಬರ ಮುಖವೂ ಕೆಂಪೇರಿದೆ. ರಾಮಚಂದ್ರನ ತುಟಿಯು ಗಾಯದಿಂದ ರಕ್ತ ಬಂದಿದೆ. ಶೇಷಗಿರಿರಾಯರ ಉಟ್ಟ ಪಂಚೆ ಕೆಲವೆಡೆ ಹರಿದಿದೆ; ಇನ್ನು ಕೆಲವೆಡೆ ಕೆಸರಾಗಿದೆ. ಕೈಯಲ್ಲಿ ಅಡಿಗೆ ಸೌಟನ್ನು ಹಿಡಿದು ಅವರ ತಾಯಿ ಅಳುಮೋರೆ ಮಾಡಿ ನಿಂತಿದ್ದಾಳೆ. ಕೈಯಲ್ಲಿ ಸಂಪುಷ್ಟವನ್ನು ಹಿಡಿದು ಕೆಮ್ಮುತ್ತ ತಂದೆ ತುದಿಕಟ್ಟೆಗೆ ಕುಳಿತಿದ್ದಾನೆ.

**ರಾಮು:**—ಅಮ್ಮನ್ನ ಕತ್ತೆ ಅಂತ ಬೈತೀಯಾ ಕತ್ತೇಮಗನೇ, ನಿನ್ನ ರಕ್ತಾ ಕುಡದು ಬಿಡ್ತೀನಿ ಈಗ.

**ಶೇಷ:** — ರಕ್ತ ಕುಡಿತಿಯಾ! ಕುಡಿ, ಕುಡಿಯೋ, ನಿನ್ನ ತುಟಿ ಒಡದು ರಕ್ತ ಸುರಿತದಲ್ಲ. ಕುಡಿ ಅದನ್ನ (ಪರಸ್ಪರ ಪೆಟ್ಟುಗಳು)

**ತಾಯಿ:**— ರಾಮಚಂದ್ರಾ, ಕೊಂದು ಬಿಡ್ತಾನಪಾ ನಿನ್ನ ಆ ಚಾಂಡಾಲ, ರಾವಣ ಇದ್ದಾಂಗ ಇದ್ದಾನವನು, ಶೇಷಾ. ಘೋಡ್ಯೋನಾಗಿ ಸಣ್ಣವನ್ನ ಹೊಡೀಲಿಕ್ಕೆ ನಾಚಿಗಿಲ್ಲೇನೋ?

**ತಂದೆ:**— ಬಾಯಿ ಮುಚ್ಚೇ ಸಾಕು, ಸಣ್ಣವನಾಗಿ ಘೋಡ್ಯಾನ್ನ ಹೊಡಿಲಿಕ್ಕೆ ನಾಚಿಗಿ ಇರಬಾರದೇನು ಈ ಮೂರ್ಖಗ? ಕೈ ಬಿಡೋ ರಾಮಚಂದ್ರಾ, ಜುಟ್ಟು ಹಿಡಿಬಾರದು ಬಿಡಪಾ. ಶೇಷಗಿರಿ ಕಸ್ತ್ಯಾಗ ಮೀಸಿ ಹುಟ್ಟಿದ್ದಾಗ ಅದ, ಬಿಡ್ತಿಯೋ ಇಲ್ಲೋ.

**ತಾಯಿ:**— ನೀವು ಸುಮ್ಮನೆ ಇರ್ರಿ ನಾನಲ್ಲೆ. ನಿಮ್ಮ ಸಂಪನ್ನ ಗಿರೀನೂ ಅಪ್ಪಾಗ ಅರ್ತವೆ. ಈ ಹುಚ್ಚುಮುಂಡೇಗಂಡ ಶೇಷಗಿರಿ ನಿಮ್ಮನ್ನೇ ಹೋತಾನ ಗುಣದಾಗ.

**ಶೇಷ**— ಅವ್ವಾ ನಿನ್ನ ಕೊಂದು ಬಿಡತೀನಿ ಇವತ್ತು. ಏನಂದಿ ಅಪ್ಪಗ? ಹುಚ್ಚುಮುಂಡೇಗಂಡಾ ಅಂತೀಯಾ? ನಿನ್ನ ಕೊಂದು ಈ ತಮ್ಮನ್ನ ಕೊಂದು........

**ತಾಯಿ:**— ಕೊಲ್ಲಪಾ ಅಗತ್ಯ ಕೊಲ್ಲು. ಜಮದಗ್ನಿ ಹೊಟ್ಟ್ಯಾಗ ಹುಟ್ಟಿದ ಪರಶುರಾಮ ನೀನು. ಅದೇನೇನು ಮಾಡ್ತೀರೊ ತಂದಿ ಮಗ ಮಾಡೇ ಬಿಡ್ರಿ.

**ರಾಮ:**— ಏನ ಮಾಡತಾರ ತಮ್ಮ ತಲಿ. ಅವ್ವಾ ನೀನು ಈಗ ಒಂದು ಮಾತು, ಒಂದೇ ಮಾತು ಹೇಳು. ಈ ಗೂರಿನ ಮುದಕನ್ನ ಈ ತೂಣ್ಯಾ ಅಣ್ಣನ್ನ ಇಬ್ಬರ್ನ ಒಂದೇ ಏಟಿಗೆ ನೆಲಕ್ಕೆ ಅಪ್ಪಳಿಸ್ತೀನಿ. ಪುರಾಣ ಬರಕೊಂಬೋರು ಹೊಸ್ತಾಗಿ ಬರಕೊಳ್ಳಬೇಕಾರೆ.

**ತಂದೆ:**— ಎಷ್ಟು ಪ್ರಬಲಾಗೀಯಪಾ ರಾಮಚಂದ್ರಾ! ನಿನ್ನ ಸಾಕೀ ಸಲಹಿ ಜ್ವಾಪಾನ ಮಾಡಿ ಧೊಡ್ಡೋನ್ನ ಮಾಡಿದ್ದಕ್ಕೆ ಎಷ್ಟು ಒಳ್ಳೇ ದಾತಲ್ಲಪಾ.

**ರಾಮ:**— ನಾನೇನು ನಿನ್ನ ಕಾಲು ಹಿಡಿದು (ಅಣಕಿಸುವ ದನಿಯಲ್ಲಿ) "ಅಪ್ಪಾ, ನನ್ನ ಜ್ವಾಪಾನ ಮಾಡಪಾ" ಅಂತ ಬೇಡಿಕೊಂಡ್ನೇನು? ಹುಟ್ಟಿದ ಘಳಿಗ್ಗೆ ಆ ತಕ್ಷಣ ನನ್ನ್ಯಾಕ ರಸ್ತೇದಾಗ ಬಿಸಾಡ್ಲಿಲ್ಲ ನೀನು? ಎಲ್ಲ್ಯಾದ್ರೂ ಬೆಳೆತಿದ್ದೆ, ಧೊಡ್ಡೋನಾಗತಿದ್ದೆ.

**ಶೇಷ:**— ಏನು ದೊಡ್ಡೋನಾಗ್ತಿದ್ದೋ! ಅಯ್ಯೋ ಜುಟ್ಟು ಬಿಡು ಅಂತೀನಿ.

**ರಾಮ:**— ನೀನು ನನ್ನ ಕ್ರಾಪು ಬಿಡು ಮೊದಲು.

**ತಂದೆ:**— ಕೂದಲು ಬಿಡ್ರೊ. ಒಬ್ಬರಿಗೊಬ್ರು ಮೈ ಕೈ ಮುಟ್ಟಿ ದ್ವಾಂಗ ಗುದ್ದ್ಯಾಡ್ರೊ ನೋಡ್ತೀನಿ.

**ಶೇಷ:**— (ಕ್ರಾಪು ಬಿಟ್ಟು) ಹೂ ಬಿಟ್ಟೇನಿ ನೋಡು. ನನ್ನ ಜುಟ್ಟು ಬಿಡು ಇನ್ನ.

**ರಾಮು** ;— ಈತ ಜ್ವಾಪಾನ ಮಾಡದಿದ್ರೆ ನಾ ಸತ್ತ್ಹೋಗತಿದ್ದ್ನೀನು? ಈಗ ಬದಿಕೀನೋ ಇಲ್ಲೊ? ಅಂದ್ರೆ ಇಪ್ಪತ್ತೇಳು ವರ್ಷ ಅಂತೂ ಆಯುಷ್ಯ ಅದೊ ಇಲ್ಲೋ. ಹ್ಯಾಗಾದ್ರೂ ಬದಕತಿದ್ದೆ.

**ತಂದೆ**:— ಹೌದಪಾ ಈ ಮಾತಿನ ಬುದ್ಧಿವಂತಿಗಿ ಇಂಥಾದೇ ಮನಿ ಹಾಳಾಗೋದು.

**ತಾಯಿ**:— ಮತ್ತ್ಯಾಕ ಅವನ ಕಪ್ರಸಿಗೆ ಕೈ ಹಾಕ್ತೀದೋ ಶೇಷಗಿರಿ?

**ತಂದೆ**:— ಹಾಕ್ಲಿ, ಯಾಕ ಹಾಕಬಾರದು. ಇವನು ಕಾಪ್ರು ಬಿಟ್ಟು ಅರ್ಧ ಗಂಟೆ ಆದರೂ ಆ ಸಿನ ಮಗಾ ಜುಟ್ಟು ಬಿಟ್ಟಾನೇನು. ಎಷ್ಟು ಸೊಕ್ಕು ನೋಡು ಆ ಚಂಡಾಲಿಗೆ.

**ರಾಮು** :— ಅಪಾ ಹುಷಾರಾಗಿ ಮಾತಾಡು ನೀನು. ಚಂಡಾಲಗಿಂಡಾಲ ಅಂತಾ ಮಾತು ಉಛ್ಛಾಯಿಸಬ್ಯಾಡ. ಮಾತು ಕಲ್ತು ನಾನು ಮನೀ ಹಾಳ್ಮಾಡಿತೀನಾ? ಮನಿ ಹಾಳ್ಮಾಡೋದು ಇವುನು ( ಹೊಡೆದ ಸಪ್ಪಳ ) ಇಗೋ ಇವುನು ( ಹೊಡೆದ ಸಪ್ಪಳ ) ಹೆಂಡತೀ ತೌರಮನಿಗೇ ಒಳಗಿಂದೊಳಗೆ ಅಕ್ಕೀಚೀಲ, ಬೆಲ್ಲದ ಚಾಪೀ, ಅಕ್ಕಡಿಕಾಳು, ಬಾಣಂತನದ ನೆವ ಮಾಡಿ ಕಳಸ್ತಾನಲ್ಲಾ ಇವನು, ನಿನ್ನ ಜೇಷ್ಠಪುತ್ರ ಮನಿ ಹಾಳ್ಮಾಡೋದು.

**ಶೇಷ**:— ಬಾಯಿ ಮುಚ್ಕೋ ಸಾಕು. ಯಾಕ ಅಂದು ಬಾಯಿ ಹೊಲಸು ಮಾಡಿಕೋತೀದಿ? ನಾನು ಆಕಿ ಬಾಣಂತೆನಕ್ಕ ಕೊಟ್ಟದ್ದೆಲ್ಲಾ ಕಲ್ತು ನೀನು ನಿನ್ನ ಹೆಂಡ್ತೀಗ ಮಾರೀಗ ಹಚ್ಕೊ ಮಸರು ತರ್ತಿಯಲ್ಲಾ— ಆಸ್ನೊ—ಆದರ ಅರ್ಥ ಆಗೋದಿಲ್ಲ.

**ರಾಮು** :— ಹೌದೋ ನಾ ತಂದು ಕೊಡ್ತೀನಿ, ನನ್ನ ಹೆಂಡ್ತೀಗ ಬೇಕಾದ್ದು ತಂದು ಕೊಡ್ತೀನಿ.

**ತಂದೆ**:— ಎ ತಂದು ಕೊಡಪಾ. ಪಾಪ ಏನ ಹಂಗ ಭೊಗಸಿಗಟ್ಲೆ ದುಡಿತಾನ! ನಾಚಿಗಿಲ್ಲೇನೊ ತಂದು ಕೊಡ್ತೀನಿ ಅಲ್ಲಿಕೆ?

**ತಾಯಿ**:— ಇರ್ಲಿ ಅಲ್ಲಿಗೆ ಬಿಡ್ರಿ ಸಾಕು; ನಿಮ್ಮ ಕಾಲಕ್ಕ ನೀವು ದುಡಿದು ಘಳಿಸಿದ್ದು ಇನ್ನೂ ಕುಟ್ರಿ ಕುಟ್ರಿ ಸವಿದನ ಬಿದ್ದದ. ಆಗಲೇ ಮುರೀತೇನೊ ತಮ್ಮಂದಿರ ಡಬ್ಬ್ಯಾಗಿಂದ ನಸ್ಯ ತೊಗೊಂಡಿದ್ದು. ಆಗ ತಮ್ಮನ ಡಬ್ಬ್ಯಾಕ್ಯತು. ಈಗ ಮಗನ ಡಬ್ಬಿ. ಇದ್ದಾನಲ್ಲ ಹಿರೇ ಮಗಾ. ನಿಮ್ಮ ಕಲ್ಯಾಣ ಗುಣಗಳೆಲ್ಲ ಪಡಮೂಡ್ಯಾವ.

**ಶೇಷ**:—ಛೀ, ಛೀ, ಪಾಪ ನಿನ ಚಿಕ್ಕ ಮಗ್ಗೆ ಏನರಾ ದುರಭ್ಯಾಸವೆ ? ಪೇವರ ಕಟ್ಟೇವಗ್ಯಾಲಿನ ಜೊಕೀಪಟಗಿ **ಮಾತ್ರ** ಹಾ ಅಂಬೋದ್ರಾಗ ಮಾಯಾಗ್ತದ.

**ರಾಮು**:— ಹೌದೋ, ಸೇದ್ತೀನಿ, ಸಿಗರೇಟು ಸೇದ್ತೀನಿ ಸ್ವಾಮೀನು.

**ತಾಯಿ**:— ಸಿಗರೇಟು ಸೇದ್ತಿತಿ, ಏನೊ ರಾಮುಚಂದ್ರ ?

**ರಾಮು**:— ಇಲ್ಲ ಸುಮ್ನೆ ಇದಮಾ, ಹೌದು ಅಂದ್ರೇನು ಸೇವಿದ ಹಾಗ ಆತೇನು.

**ತಂದೆ**:— ಆಗೋದೇನು, ತುಟಿ ನೋಡೇ ಅವಸ್ದು.

**ರಾಮು**:— ಏನಾಗ್ಯದ ತುಟಿ? ರಕ್ತ. ನನ ತುಟಿ ಒಡದೀಯಾ ನೀನು ಆ ( ಏಟುಗಳು ).

**ತಂದೆ**:— ಅಯ್ಯೊ ಚಂಡಾಲ, ಕೊಲ್ತೀಯೇನೋ ಶೇಷಗಿರಿನ್ನ ? ರಾಮುಚಂದ್ರಾ, ಅಣ್ಣನ್ನ ಕೆಳಗಾಕಿ ಮ್ಯಾಲೆ ಕೂತುಗೊಂಡು ಹೊಡೀತಿ ನಲ್ಲೋ.

**ಶೇಷ**:— ( ಕೆಳಗಿನಿಂದಲೇ ) ನನ್ನೇನು ಹೊಡಿತಾನ ಅವನ ತಲಿ. ರಾಮುಚಂದ್ರಾ ಏಳು ಒಳ್ಳೇ ಮಾತಿಲೆ. ನಾ ಎದ್ದೇ ಅಂದ್ರೆ—

**ರಾಮು**:— ನಿನ್ನ ಜೀವ ಉಳದ್ರ ಅಲ, ನೀನು ಏಳೋದು ( ಏಟುಗಳು )

**ತಂದೆ**:— ಅಯ್ಯಯ್ಯೊ ಭ್ರಾತೃಹತ್ಯಾ ಮಾಡ್ತೀಯಲ್ಲೋ ರಾಮುಚಂದ್ರಾ.

**ತಾಯಿ**:— ನೀವ್ಯಾಕ ಹೋಗ್ತೀರಲ್ಲೇ ಮೈಲಿಗಾದೀತು!

**ತಂದಿ**:— ಮೈಲಿಗಂತ. ಸಾಯಿತಾನ ಶೇಷಗಿರಿ. ಹಿಡಿ ಈ ಸಂಪುಷ್ಟ ಸ್ವಲ್ಪ, ಬಿಡಸ್ತೀನಿ ಅವರ್ನ.

**ತಾಯಿ**:— ನಾನ್ಯಾಕ್ಯಗ ಮುಟ್ಲೆ ಅವನ್ನ, ಅದರೊಳಗ ಸಾಲಿಗ್ರಾಮ ಅದೆ ? ಮಹಾ ತೀಕ್ಷ್ಣ ಅದು ( ಏಟುಗಳ ಸಪ್ಪಳ ) ಅಯ್ಯೊ, ಅಯ್ಯೊ. ಶೇಷಗಿರೀ, ಕೊಂದ್ಬಿಡಪಾ ಆ ಕೂಸಿನ್ನಾ. ಅವನ್ನ ಕೆಳಗ್ಹಾಕಿ ನೀನು ಮ್ಯಾಲೆ ಕೂತಿಯಲ್ಲೋ ಕತ್ತಿ ಆಗೀದಿ. ನೋಡ್ತಾ ನಿಂತಾರಲ್ಲ ಇವರಿನ್ನಾ, ಬಿಡಸ ಹೋಗ್ರೀ

**ತಂದೆ** :— ನಾನ್ಯಾಕ್ಯಾಗ ಬಡಸ್ಲೇ ಮಡೀಲಿದ್ದೀನಿ? ಹೊಡದಾಡ್ಲಿ ಬಿಡು ಸಾಕಾದ್ಮ್ಯಾಲೆ ತಾವೇ ಬಿಡ್ತಾರೆ.

**ತಾಯಿ** :—ಇನ್ನ್ಯಾವಾಗ ಪ್ರಾಣ ಹೋದ್ಮ್ಯಾಲೆ! ನಿಮ್ಮ ಮಡೀಗ ಬೆಂಕಿ ಹಚ್ಚಿತು, ಹೋಗ್ರಿ, ಮತ್ತೊಮ್ಮೆ ಮುಣಗಿದ್ರಾತು.

**ತಂದೆ**:— ಹ್ಯಾಗ್ಹೋಗಲಿ ನಾನು, ಕೈಯಾಗ ಸಂಪುಷ್ಟ, ಬ್ಯಾರೆ ಕಾಣಿಸಲ್ಲೇ?

**ತಾಯಿ**:— ಇಲ್ಲಿ ತರ್ರಿ ನನ್ನ ಕೈಯಾಗ ಆ ಸಂಪುಷ್ಟ, ಬಿಡಿಸ್ರಿ ಹೋಗ್ರಿ ಮೊದಲು ರಾಮಚಂದ್ರ ಸಾಯ್ತಾನ.

ತಂದೆ: — ಸಂಪುಷ್ಟಾ ನೀನ್ಯಾಕ್ಯಾಗ ಮುಟ್ಟತೀಯು? ಅದರಾಗ ಸಾಲಿಗ್ರಾಮ ಅದೆ ಮಹಾತೀಕ್ಷ್ಣ ಅದು.

**ತಾಯಿ**: ಅಯ್ಯ, ಏನು ಮಾತಿಗೆ ಮಾತು ಹೇಳತ್ತಾರಲ್ಲಿವರು? ನಾನ್ಯಾಕೆ ಮುಟ್ಲಿ ಅದನ್ನ? ನನ ಕೈಯಾಗಿನ ಸೌಟಿನಾಗ ಬಡೀರಿ ಸಂಪುಷ್ಟಾನ. ಬಿಡ್ಸಿ, ಹೋಗ್ರೀ ಮೊದಲು.

**ತಂದೆ**: ಏನಾಗ್ತಿದ್ದೀತು ಅಷ್ಟ್ಯಾಗ. ಸಾಯ್ತಾನೆ. ಹೂ ತೊಗೋ. ಬಂದ ಪಾಪ ನಿನಗೇ ಬರ್ಲಿ. ತಗಿಯೋ ರಾಮಚಂದ್ರಾ ಆ ಜುಟ್ಟು ಬಿಡು.

**ರಾಮು**:—ಅವನ್ನ ಮೊದ್ಲ ಏಳೂ ಅನ್ನು ಅಲ್ಲಿಂದ ಬಿಡ್ತೀನಿ.

**ತಾಯಿ**:— **ಶೇಷಗಿರಿ**,

**ಶೇಷ**: — ನಾ ಹ್ಯಾಗ ಎಳ್ಳೀ? ಜುಟ್ಟು ಬಿಡಿಸು ನಾ ಏಳ್ತೀನಿ.

**ರಾಮು**:— ನೀ ಏಳು ನಾ ಬಿಡ್ತೀನಿ.

**ಶೇಷ**:— ನೀ ಬಿಡು ನಾ ಏಳ್ತೀನಿ.

**ತಂದೆ**:— **ರಾಮಚಂದ್ರಾ, ಬಿಡಪಾ ಜುಟ್ಟು** ಬಿಡು. ನನ್ನ **ಮಾರೀ ನೋಡಿ ಬಿಡು.**

**ರಾಮು**:— ಏನ **ನೋಡೋದು** ನಿನ **ಮಾರೀ**, ಮುಂಜಾನೆ ಎದ್ದು ಫಳಗ್ಗೆ ನಿನ ಮಾರೀ ನೋಡಿದ್ದಕ್ಕೆ ಈ ಲಕ್ಷಣ ಆಗಿರೋದು.

**ತಂದೆ**:— ಥೂ, ಚಾಂಡಾಲಾ ನಿನ್ನ ಧೊಡ್ಡೋನ್ನಮಾಡಿ ತಿರುಪತ್ಯಾಗ ಮುಂಜೀ ಮಾಡಿದ್ನಲ್ಲೋ.

**ರಾಮು**:— ತೊಗೊಳ್ಳೊ ನಿನ್ನ ಯರಡು ಬಿಲ್ಲೀ ಜನಿವಾರ. ಈ ಸತ್ತ ಧಾರಕ್ಯಾಕ ನಿನ ಹಂಗು?

**ತಂದೆ:**— ಅಯ್ಯೋ ಚಂಡಾಲ. ನಿನ್ನ ಮಗ ಅಂತ ಹೇಳಿಕೊಳ್ಳಿಕೆ ನನಗ ನಾಚಿಗಿ ಆಗ್ತದ.

**ತಾಯಿ:**— ಏಳೋ ಶೇಷಗಿರಿ. ಅವನು ಕೆಳಗೆ ಸತ್ತು ಹೋದಾನು

**ಶೇಷ:**— ಮೊದಲವನ್ನ ಜುಟ್ಟು ಬಿಡಿಸು.

**ರಾಮ:**— ಹೂಂ ಬಿಟ್ಟೇನಿ ನೋಡು.

**ಶೇಷ:**— ಹೂಂ ಎದ್ದೀನಿ ನೋಡು.

**ರಾಮ:**— ಎದ್ದೀಯಾ, ಇಗೊ ಇಲ್ಲಿ ನೋಡು. ನಿನ್ನ ತಲಿ ಬಿಟ್ಟೇನಿ. ಅಷ್ಟೆ ಜುಟ್ಟು ಕೈಯಾಗ ಬಂದಾವೆ.

**ತಂದೆ:**— ಆಹಾಹ, ಏನು ಮಗನ್ನ ಹಡದೆ!

೨

[ರಾಮಚಂದ್ರ ಶೇಷಗಿರಿ ಅವರ ಸಲುವಾಗಿ ಎಲೆಯಲ್ಲಿ ಊಟ ಬಡಿಸಿದೆ. ಅವರು ಮಾತ್ರ ತಮ್ಮೆರಡು ಎಲೆಗಳ ಮಧ್ಯದಿಂದ ಉದ್ದಕ್ಕೂ ಗೋಡೆ ಕಟ್ಟುತ್ತಿದ್ದಾರೆ ತಂದೆ ಹಸಿವೆಯಿಂದ ನೆಲಕ್ಕೆ ತಲೆ ಕೊಟ್ಟಿದ್ದಾನೆ. ತಾಯಿ ಕಂಬಕ್ಕೆ ಆತು ಗಲ್ಲಕ್ಕೆ ಕೈ ಕೊಟ್ಟು ಕುಳಿತಿದ್ದಾಳೆ.]

**ತಾಯಿ:**— ರಾಮಚಂದ್ರಾ. ಎಲ್ಯಾಗಿನ ಅನ್ನ ಆರಿ ಅಂಗಾರ ಆಗೇದ, ಊಟಾ ಮಾಡ್ರಾರ್ದ ಮೊದಲು.

**ರಾಮ:**— ಊಟ! ಶೇಷಗಿರಿ ಸಂಗ್ತ್ಯಾಗ ನನ್ನ ಊಟಾನೆ? ಎಂದೆಂದಿಗೂ ಆಗ್ಲಿಕ್ಕಿಲ್ಲ. ಈ ಮನಿ ಎರಡು ಭಾಗ ಆಗ್ಬೇಕು, ನನ್ನ ಮನ್ಯಾಗ ನಾನು ಕೂತು ಉಣಬೇಕು.

**ತಂದೆ:**— ಶೇಷಗಿರಿ, ಉಂಡ್ಹೋಗಿ ಗ್ವಾಡೀಕಟ್ಟಿದ್ರೆ ಒಲ್ಲೆ ಅಂತದೇ ನಾ? ಊಟದ ಹೊತ್ನ್ಯಾಗ ಇದೇನು ಕೈಯಲ್ಲಾ ಕೆಸರು ಮಾಡಿಕೊಂಡೀದಿ, ಮನೀ ತುಂಬಾ ಏನು ಇಟ್ಟಂಗಿ ಹರವೀದಿ. ಬಾರಪಾ, ಊಟಾಗ್ಲಿ ಮೊದಲು, ನನಗ ಹಸಿವಿ ಆಗಿ ತಲಿ ತಿರುಗತದ.

**ಶೇಷ:**— ಊಟ! ಈ ಮನ್ಯಾಗ ಮಧ್ಯ ಗ್ವಾಡಿ ಆಗ್ಬೇಕು, ಚಿತ್ರಾವತಿ ಆರುವಬೇಕು ಅಂತ ಶಪಥ ಮಾಡೀನಿ ಶಪಥಾ! ಇಂಥಾ ಚಂಡಾಲ ಇದ್ದ ಮ್ಯಾಲೆ ಇನ್ನೇನದ. ಅಮ್ಮಾ! ನಾನು ಹುಟ್ಟಿದ ತಕ್ಷಣ ನೀನು ಸತ್ತಿದ್ದರೆ ಛಲೋ ಆಗ್ತಿತ್ತು ನೋಡು. ಈ ಅಣ್ಣ-ತಮ್ಮಂದಿರ ವ್ಯಾಜ್ಯಾನ ಬರ್ತಿದ್ದಿಲ್ಲ.

**ರಾಮು:—** ಹುಟ್ಟಿದ ಫಳಿಗ್ಗೆ ನೀನೇ ಸತ್ತಿದ್ರೆ?

**ಶೇಷ:—** ಬಾಯಿ ಮುಚ್ಕೋ ನೀನು. ಗ್ಯಾಡಿ ಮುಗೀತಾ ಬಂತು. ಇನ್ಯಾಕ ವದರಾಡ್ತೀದಿ?

**ರಾಮು:—** ಗ್ಯಾಡಿ ಮುಗಿತು ಅಂತಾನೆ ವದರಾಡ್ತಿನೋ, ನನ್ನ ಮುನ್ಯಾಗ ನಿಂತು ನಾನು ಬೇಕಾದ್ದು ವದರಾಡ್ತೀನಿ.

**ತಾಯಿ:—** ಸಾಕು ಬಿಡ್ರೊ ಇನ್ನ. ಅಣ್ಣತಮ್ಮಂದಿರು ಹೀಗೆ ಗುದ್ಯಾಡೋದು ಎಲ್ಲಿ ಕೇಳಿಲ್ಲಪಾ.

**ರಾಮು:—** ಏನಮ್ಮ ಹೀಗಂತೀದಿ, ದಿನಾ ಪುರಾಣಕ್ಕೆ ಹೋಗ್ತೀಯಲ್ಲ, ಇದೇ ಏನು ನೀನು ಕೇಳಿರೋದು? ಪಾಂಡವರು ಕೌರವರು ಅಣ್ತಮ್ಮಂದಿರಲ್ಲೇನು?

**ಶೇಷ:—** ವಾಲಿ ಸುಗ್ರೀವ ಅಣ್ತಮ್ಮಂದಿರಲ್ಲೇನು?

**ರಾಮು:—** ಅಂಣಾ, ಹುಷಾರಾಗಿ ಮಾತಾಡು, ನಿನಗ ಬೇಕಾದರ ನೀನು ವಾಲಿ ಅಂದುಕೋ. ನನಗ ಸುಗ್ರೀವ ಅಂದ್ರೆ ಕೆಟ್ಟ ನೋಡು. ನನಗ ಕೋತಿ ಅಂತೀಯ ನೀನು.

**ತಂದೆ:—** ಸಾಕ್ಬಿಡ್ರೋ, ಆ ಪುರಾಣ ಯಾಕ ಎಳಕೊಂಬರ್ತೀರಿ ನಿಮ್ಮ ನರಕಕ್ಕೆ?

**ರಾಮು:—** ಅಂಣಾ, ಹೂ, ಮುಗಿತು ಗ್ಯಾಡಿ, ಇನ್ನ ಎಳಿ, ಸಾಮಾನು ಗಳು ಒಂದೊಂದೇ ಭಾಗ ಮಾಡ್ಲಿಕ್ಕೆ....

**ತಾಯಿ:—** ಅಗತ್ಯ ಭಾಗ ಮಾಡಿಕೊಳಿಪಾ, ಏನು ಲಕ್ಷ್ಮಿ ದಿಕ್ಕೆಟ್ಟು ಕಾಲು ಮುರಕೊಂಡು ಮೂಲಿ ಮೂಲಿಗೆ ಬಿದ್ದಾಳೆ. ಆದೇ ಎರಡು ಪಡಕ ಪಾತ್ರಿ ಬೋಕಿ ಚೂರು ಅಜ್ಜನಕಾಲದಿಂದ ಉಳಿದಿರೋದು. ಇನ್ನ ನಿಮ್ಮ ಅಪ್ಪ ಸಂಪಾದಿಸಿಟ್ಟಿರೋದು ಊರು ತುಂಬ ಸಾಲ. ಆಗ್ರಿ ಪಾಲಾಗಿ ಸುರುಕೊಳ್ರಿ.

**ತಂದೆ:—** ಸುರಕೋತಾರೇ, ಸುರುಕೋತಾರೆ. ಅವರಪ್ಪ ಮಾಡಿಟ್ಟ ಸಾಲ ಅಂತ ಬೊಗಳ್ತೀಯಲ್ಲ, ಸಾಲ ಯಾಕ ಮಾಡಿದ ಅವರಪ್ಪ ಅದನ್ನ ಹೇಳು. ನಿನ್ನ ತಂಗೀ ಮದುವೀಗೆ, ನಿನ್ನ ತಮ್ಮನ ಓದಿಗೆ, ನಿನ್ನ ಹೆರಿಗೆ, ನಿನ್ನಪ್ಪನ ಗೂರಿನ ಔಷಧಕ್ಕೇ ಸಾಲ ಮಾಡಿಸಿ—

**ತಾಯಿ:**— ಆ ಸುದ್ದಿ ಬಿಡ್ರಿ ಇನ್ನ ಸಾನೊಲ್ಲೆ. ನನ್ನ ತವರುಮನಿ ದೂರಿ ಯಾವ ನರಕಕ್ಕೆ ಹೋಗ್ಬೇಕು ಅಂತ ಮಾಡೀರಿ? ಆ ಮಾರ್ಡ್ಹಾಯ ನಮ್ಮಪ್ಪ ಸತ್ತು ಸ್ವರ್ಗದಾಗ ಇದ್ದಾನ ಈಗ, ಆತ ನನ್ನ ಹೆತ್ತು ನಿಮಗ ಧಾರಿ ಎರದು ನನ್ನ ಆಹುತಿಕೊಟ್ಟ ಆತ ನೀವೂ ಕಂಡ್ರಿ ಒಂದು ಹೆಂಡತಿ, ಮನಿ, ಬಾಗಿಲು, ಮಕ್ಕಳು—

**ತಂದೆ :**— ಹೂ, ಈ ಮಕ್ಕಳ ಯುದ್ಧ, ನಿನ್ನ ಬಾಯಿಂದ ಸಂಣ ಪುಟ್ಟ ಮಾತುಗಳು (ವಳಗೆ ಪಾತ್ರೆ ಸಾಮಾನುಗಳು ಉರುಳಿದ ಸಪ್ಪಳ)

**ತಾಯಿ :**— ಏನು ಕೆಡವಿದಿರೋ ವಳಗೆ? ತಂಬಿಗಿ ತಪ್ಪೇಲಿ ಚೀಲ ಯಾಕ ಎಳತೀರೋ?

**ರಾಮು :**— ಹೂ ತಗಿ, ಒಂದೊಂದೇ ಇಡು ಸಾಲಾಗಿ. ಆ ಮೂರ ಸೇರಕ್ಕಿ ತಪ್ಪೇಲಿ ಯಾಕ ಬಚ್ಚಿಡುತೀದೋ ಶೇಷಗಿರಿ?

**ಶೇಷ:**— ಅದನ್ಯಾಕ ಪಾಲಿಗೆ ಹಾಕಲಿ ನಾನು? ಅದನ್ನ ನನ್ನ ಹೆಂಡತಿ ತವರುಮನಿಯಿಂದ ತಂದಾಳ.

**ರಾಮು :**— ಏ ಹೌದಪಾ, ಕುಬೇರನ ಮಗಳ್ನ ಮದುವಿ ಆಗೀದಿ. ನಾವು ತಿಸ್ತಿರೋ ಅನ್ನ, ಹಚ್ತಿರೋ ದೀಪ ನಿನ ಮಾವಂದೇ. ಆ ಅಪರಾ ಮಾಡ್ಸೋ ಆಚಾರಿ ತಪ್ಪೇಲಿ ಕೊಟ್ಟಾನಂತ!

**ಶೇಷ:**— ಏ, ಯಾಕ ಹಂಗ ಸನ್ನಿ ಬಡದವರ ಹಂಗ ವದರಾಡ್ತೀದಿ· ನೋಡೋ! ತಪ್ಪೇಲಿ ಮ್ಯಾಲಿನ ಹೆಸರು ನೋಡು. ವಿಳಾಸ ಏನದ ನೋಡು.

**ರಾಮು :**— (ಓದುವಂತೆ) ಕಸ್ತೂರಿ....ಸುಬ್ಬ....ಶೆಟ್ಟಿಯ ಧರ್ಮ. ಆ. ಹೌದಪಾ, ನಿಮ್ಮ ಮಾವಂದು. ದೇವರಾಣಿ ನಿಮ್ಮ ಮಾವಂದೇ. ನನಗ ಬ್ಯಾಡಪ ಈ ಧರ್ಮದ್ದು.

**ತಂದೆ :**— ಶೇಷಗಿರೀ, ಆ ಇಡ್ಲಿಪಾತ್ರಿ ನೀನಿಟುಗೋ. ಹುಡುಗರ್ರ ಹುಪ್ಪಟ ಇದ್ದ ಮನಿ, ಬೇಕಾಗ್ತದೆ.

**ತಾಯಿ:**— ಅದು ಹ್ಯಾಗಾಗ್ತದ? ರಾಮುಚಂದ್ರನ ಹೆಂಡತಿ ಹಡೀದಾಗ ಇರ್ತಾಳೇನು? ಅವನಿಗೂ ಬೇಕದು.

**ರಾಮು :**— ಅಮ್ಮಾ, ನೀವು ಯಾಕ ವಾದಿಸಾಡ್ತೀರಿ, ಇಡ್ಲಿಪಾತ್ರಿ ಇರೋದು ಒಂದೇ ಹೌದಲ್ಲೋ?

**ಶೇಷ :**— ಹೌದು.

**ರಾಮು**:— ಹಾಗಾದರ ಇಬ್ಬರೂ ತೊಗೊಂಬೋಣ. ಶೇಷಗಿರೀ, ನೀನು ಮ್ಯಾಲಿನ ಮುಚ್ಚಳ ತೊಗೋ, ನಾನು ಕೆಳಗಿನ ಪಾತ್ರಿ ತೊಗೊತೀನಿ.

**ತಂದೆ**:— ಶಬಾಸ್ ರಾಮಚಂದ್ರ ಶಬಾಸ್, ಏನು ಬೃಹಸ್ಪತಿ ಹುಟ್ಟಿದೋ ನನ ಹೊಟ್ಟ್ಯಾಗ!

**ಶೇಷ**:— ಈ ರುಬ್ಬು ಗುಂಡು?

**ರಾಮು**:— ಒಂದೊಂದೆ ಕೇಳಲೆ ಬ್ಯಾಡ. ಪಾಲಾಗ್ಬೇಕು ಅಂದ ಮ್ಯಾಲೆ ಪಾಲಾಗ್ಬೇಕು. ಅಷ್ಟೆ. ಅದನ್ನ ವಡಸಬೇಕು, ಇಬ್ಬರು ಅರ್ಧರ್ಧ ತೊಗೋಬೇಕು.

**ತಾಯಿ**:— ರುಬ್ಬು ಗುಂಡು ವಡಸಬೇಕು!

**ತಂದೆ**:— ಅಲ್ರೋ, ಅದನ್ನ ವಡಿಲಿಕ್ಕೆ ನಾಲ್ಕು ನಾಲ್ಕು ರೂಪಾಯಿ ಕೇಳ್ತಾರಲ್ರೋ?

**ರಾಮು**:— ತೊಗೋ ನನ್ನೆರಡು ರೂಪಾಯಿ.

**ಶೇಷ**:— ತೊಗೋ ನನ್ನೆರಡು ರೂಪಾಯಿ; ಆ ಮೂಲ್ಯಾಗ ಚೀಲ ದಾಗಿನವೇನು?

**ತಂದೆ**:— ಏನು ಇಲ್ಲಪಾ, ಒಂದು ನೂರು ಸೇರು ಜ್ವಾಳ ಅವೆ.

**ಶೇಷ**:— ಹೂ ಅಳೆದು ಬಿಡು, ನನ್ನ ಐವತ್ತು ಸೇರು

**ರಾಮು**:— ಐವತ್ತು ಸೇರು! ಅದೆಲ್ಲ ಸಾಧ್ಯಲ್ಲ! ಅದರಾಗ ಎಷ್ಟು ಹುಳುಕವೋ. ಪಾಲು ಅಂದ್ರೇನು, ಒಂದೊಂದು ಕಾಳು ಎರಡು ಭಾಗ ಮಾಡಬೇಕು, ಹಂಚಿಗೋಬೇಕು ಅಷ್ಟೆ. ಈ ವನಿಕಿ?

**ಶೇಷ**:— ಹಾಕು, ಅಡ್ಡ ತುಂಡು.

**ರಾಮು**:— ಅಡ್ಡ ತುಂಡು! ಖಬ್ಬಣದ ಅಣಸು ನೀನು ಒಯ್ಯಾಲಿ ಕ್ಕೇನು? ಅದನ್ನ ಉದ್ದ ಸೀಳಬೇಕು ಕಬ್ಬಿಣ ಸಹಿತ.

**ತಂದೆ**:— ನಿಮ್ಮ ಪಾಲಿನಾಗ ನಮ್ಮನ್ನು ಹಂಚಿಗೊಂಡ್ರಿಪಾ, ಏನು ಸುಪುತ್ರರೋ!

**ರಾಮು**:— ಅದು ಈಗಲ್ಲ, ಮೊದಲು ಆಸ್ತಿ, ಅಲ್ಲಿಂದ ಸಾಲ ಹಂಚೋದು. ನಿಮ್ಮನ್ನ ಸಾಲದಾಗ ಹಾಕ್ಯದ.

**ತಾಯಿ**:— ಸಾಲ್ದಾಗ? ತಂದಿ ತಾಯಿ ಸಾಲದಾಗ ಯಾಕೋ ರಾಮಚಂದ್ರ?

**ರಾಮು**:— ಅಲ್ಲವ್ವಾ, ತಂದಿ ತಾಯಿನ್ನ ಪ್ರದಕ್ಷಿಣಿ ಹಾಕಿದರೆ ಇಡೀ ಜಗತ್ತೀ ಪ್ರದಕ್ಷಿಣಿ ಹಾಕಿದ್ಹಾಂಗ ಅಂತ ಹೇಳಿಲ್ಲೇನು ಷಣ್ಮುಖ? ಅಂದಮ್ಯಾಲೆ ತಂದಿ ತಾಯೀಗೆ ಅನ್ನ ಹಾಕೋದು ಅಂದ್ರೆ ಇಡೀ ಜಗತ್ತಿಗೆ ಹಾಕಿದಹಾಗಲ್ಲ? ಅಂಥ ಸಾಲ ಒಬ್ಬರೆ ಹೇಂಗ ಹೋರೋದು?

**ತಂದೆ**:— ಮುಂದ ನೀನು ಹುಟ್ಟತಿ ಅಂತ ಗೊತ್ತಿದ್ದಿಲ್ಲಸಾ ಷಣ್ಮುಖಗೆ, ಆಹಾ ಏನು ದಿವ್ಯ ಮಗನೇ!

**ತಾಯಿ**:— ನೀವು ಮಾತಾಡಬ್ಯಾಡ್ರಿ ಅಂತೀನಿ. ನಿಮ್ಮ ಸಂಪನ್ನ ಗೀನು ಅಷ್ಟರಾಗ ಅಳ್ತದೆ. ನೀವು ಪಾಲಾದಾಗ ಜೆಂಡಾಲಿ ಮುಕುಟಟು ಹರಳು ಸಹಿತ ಕರಗಿಸಿದ ಬೃಹಸ್ಪತಿಗಳು ನೀವೂನು.

**ರಾಮು**:— ಹೂ, ಈ ಮನಿ?

**ಶೇಷ**:— ಇನ್ನೇನು ಮನಿ? ಗ್ವಾಡಿ ಹಾಕೇವಲ್ಲ.

**ರಾಮು**:— ಅದು ಅಡಿಗಿಮನಿಗಾತು.

**ಶೇಷ**:— ಹೂ ಆರಿಸಿಗೋ. ನಿನಗೆ ಮ್ಯಾಲಿನ ಮಹಡಿ ಬೇಕೋ, ಕೆಳಗಿನ ಮನಿ ಬೇಕೋ. ಕೆಳಗಿನ ಮನಿ ಧೊಡ್ಡದದೆ. ಅದನ್ನ ತೊಗೊಂಡವರು ಎರಡು ನೂರು ರೂಪಾಯಿ ಕೊಡಬೇಕು.

**ತಾಯಿ**:— (ಮೆಲು ದನಿಯಲ್ಲಿ) ನೀನು ಮಹಡೀನೆ ತೊಗೊ ರಾಮಚಂದ್ರಾ, ಭಂಗಾರಧಾಂಗ ಘಾಳಿ ಬರ್ತದೆ.

**ರಾಮು**:— ಬ್ಯಾಡ, ನನಗ ಕೆಳಗಿನ ಮನೀನ ಇರಲಿ.

**ತಾಯಿ**:— ಬ್ಯಾಡೋ ರಾಮಚಂದ್ರ, ಎರಡು ನೂರು ರೂಪಾಯಿ ಕೊಟ್ಟು ಈ ಹಳೀ ಕತ್ತಲಮನಿ ಯಾಕ ತೊಗೋತೀದಿ?

**ರಾಮು**:— ಸುಮ್ಮನಿರವ್ವಾ ನಿನಗೇನು ಗೊತ್ತು. ಅವನೇ ಮ್ಯಾಲಿರಲಿ. ನಮ್ಮನಿ ಗ್ವಾಡಿ ನಾವು ಯಾವಾಗಾದರು ಕೆಡವುತೀವಿ. ಅವನು ಆವಾಗೂ ಮಹಡಿ ಮ್ಯಾಲೆ ಇರಲಿ........ಹೂ, ಇನ್ನ ದನ ಕರುಗಳು ಉಳಿದವು.

**ಶೇಷ**:— ದನಕರ ಅಲ್ಲಿಕ್ಕೆ ಏನವೆ? ಆದೇ ಒಂದು ಬಡಕಲು ಆಕಳು ಮನ್ನೆ ಹುಟ್ಟಿದ್ದೊಂದು ಕರ.

**ರಾಮು**:— ಆ ಕರ ನೀನು ತೊಗೊ, ಆಕಳು ನಾನು ತೊಗೋತೀನಿ.

**ಶೇಷ:**— ಆ ಕರಕ್ಕೆ ಹಾಲು?

**ರಾಮು:**— ನನ್ನೇನು ಕೇಳುತೀದಿ, ಸಾರು ಅನ್ನ ಉಣಿಸು ಬೇಕಾದರೆ ನನ್ನ ಅಕ್ಕಳ ಹತ್ತರ ಪುತ್ರ ಬಂದರೆ ಆದನ್ನ ಸರಕಾರದ ದೊಡ್ಡೀಗ ಕೊಡ್ತೀನಿ ಅಷ್ಟೆ.

**ತಂದೆ:**— ಪ್ರಗ್ಯಾ ಕಟಗೊಳ್ಳಪಾ ಗೋಹತ್ಯ ಕೂಡ ಮಾಡಿ. ನಿಮ್ಮ ಪಾಲಿನಿಂದ ಇನ್ನೇನೇನು ಅನಾಹುತ ಆಗಬೇಕೋ ಎಲ್ಲ ಆಗಿ ಹೋಗಲಿ.

**ರಾಮು:**— ನೀನು ಹಾಗೆ ಹೇಚಾಡ್ತಿರು. ಅಂಗಾ, ಇನ್ನೇನು ಉಳಿತು.

**ಶೇಷ:**— ಸಾಲ

**ರಾಮು:**— ಜೇಟಾಜಿ ನತ್ಮಲ್‌ನ ಹತ್ತಿರ ಎಷ್ಟಿದೆ?

**ತಾಯಿ:**— ಹೇಳ್ರಿ ಸಾಲ ಘಳಿಸಿದವುರು, ಬಾಯಾಗೇನು ಕಡುಬು ಇಟುಗೊಂಡೀರೇನು?

**ತಂದೆ:**— ಎರಡು ಸಾವಿರ ಆದಪಾ.

**ರಾಮು:**— ಯಾತಕ್ಕ ಆ ಸಾಲ ಮಾಡಿದ್ದೂ?

**ತಂದೆ:**— ಇನ್ಯಾಕೆ ನಿಮ್ಮನ್ನ ಜ್ವಾಪಾನ ಮಾಡಿ ದೊಡ್ಡವರನ್ನ ಮಾಡ್ಲಿಕ್ಕೆ.

**ಶೇಷ:**— ಆ ಸಾಲ ನಾನ್ಯಾಕೆ ಹೊರಲಿ. ಹುಟ್ಟಿದಾರಭ್ಯ ನಮ್ಮಾವನ ಮನ್ಯಾಗ ಬೆಳದೀನಿ ನಾನು.

**ರಾಮು:**— ಮಾವನ ಮನ್ಯಾಗ ಬೆಳದೀಯು? ನನಕಿಂತ ಎಂಟು ವರ್ಷ ಮುಂದೆ ಹುಟ್ಟೀಯುಲ್ಲ ನೀನು. ಆಗ ಆದ ಖರ್ಚು ನಾನು ಯಾಕ ಭರಿಸಲಿ? ಹಾಗಾದರೆ ಆದಿರಲಿ, ಮೊದಲು ಈ ಧೊಡ್ಡ ಸಾಲ ಬಗಿ ಹರಿಸು-

**ಶೇಷ:**— ಯಾವ ದೊಡ್ಡ ಸಾಲ?

**ರಾಮು:**— ಇನ್ಯಾವುದು? ಅಪ್ಪ-ಅಮ್ಮ. ಅಂಣ, ನನಗಂತೂ ಅಪ್ಪ ಇರ್ಲಿ.

**ತಂದೆ:**— ರಾಮುಚಂದ್ರ, ಮುಪ್ಪಿನ ಕಾಲಕ್ಕೆ ನಮ್ಮನ್ನು ಅಗಲಿಸಿ ಏನು ಮಾಡಬೇಕು ಅಂತೀದಪಾ? ನಾನು ರಾಮುಚಂದ್ರನ ಮನ್ಯಾಗ ಎಂದೆಂದಿಗೂ ಇರೋದಿಲ್ಲ.

**ತಾಯಿ**:— ಶೇಷಗಿರಿ ಮನ್ಯಾಗ ನಾನಂತೂ ಸರ್ವಥಾ ಇರೋದಿಲ್ಲ. ನನ್ನ ತುತ್ತು ಅನ್ನೇನು, ಎಲ್ಲ್ಯಾದರೂ ಅಡಿಗಿ ಮಾಡಿ ದುಡುಕೋತೀನಿ.

**ತಂದೆ**:— ನನಗ ಮಾತ್ರ ಏನು, ಎಲ್ಲ್ಯಾದರೂ ನೀರು ಹೊತ್ತು ತಿಂತೀನಿ.

**ರಾಮು**:— ಎಲ್ಲ್ಯಾದರೂ ಯಾಕ ನನಮನಾಗ ನೀರು ಹೊರು ಅಂತ ನಾನು ಹೇಳಿದ್ದ.

**ಶೇಷ**:— ಹೌದಮ್ಮ ನೀನು ಅಷ್ಟೆ ಮಾಡು. ನನ್ನ ಮನಾಗ ಅಡಿಗಿ ಮಾಡು, ಅದೇ ತುತ್ತು ಅನ್ನ ನಾನೆ ಹಾಕ್ತೇನಿ.

( ಹೊರಬಾಗಿಲಲ್ಲಿ "ಸಾರ್" ಎಂದಂತಾಗುವದು. )

**ತಾಯಿ**:— ಯಾರದು ಹೊರಬಾಗಿಲಾಗೆ?

**ರಾಮು**:— ಯಾರ ಬಾಗಿಲಾಗೆ? ನನ್ನ ಬಾಗಿಲಾಗ ಬಂದರೆ ಅಷ್ಟ ಕೇಳ್ಬೇಕು. ನೀನು ಯಾಕ ಕೇಳ್ತೀದಿ?

**ತಂದೆ**:— ಯಾರಪ ಅದು, ಯಾರು ನೀನು?

**ವಾ. ಹು**:— ನಾನು ಸಾರ್, ವಾರದ ಹುಡುಗ ಸಾರ್, ನಾಳೆ ಸಾರ್ ಸೋಮವಾರ ಸಾರ್. ನಿಮ್ಮ ಮನೆ ಸಾರ್, ವಾರ ಇತ್ತು ಸಾರ್, ಅದಕ್ಕ ಸಾರ್........

**ರಾಮು**:— ನಿಮ್ಮ ಮನೆ ಅಂದ್ರೆ, ಯಾರ ಮನೀನೋ ಸಾರು? ಸ್ಪಷ್ಟವಾಗಿ ಹೇಳು. ಈಗೆರಡು ಮನಿ ಆಗ್ಯಾವೆ. ಅಂಣಾ, ಈ ವಾರದ ಹುಡುಗನ್ನ ಹಂಚಿಗೊಂಬಿಡೋಣ.

**ಶೇಷ**:— ಅಗತ್ಯ ಆಗಲಿ, ನಾನು ಯಾವುದಕ್ಕ ಬ್ಯಾಡ ಅಂದೀನಿ?

**ರಾಮು**:— ಇಗೊಳ್ಳಪ ತಮ್ಮ, ಸೋಮವಾರ ನಮ್ಮ ಅಂಣನ ಮನಿ, ಮಂಗಳವಾರ ನಮ್ಮ ಮನಿ. ಈಗ ನಾವು ಪಾಲಾಗೀವಿ.

**ವಾ. ಹು**:— ಆಗಲಿ ಸಾರ್, ಬಹಳ ಒಳ್ಳೇದಾಯಿತು ಸಾರ್, ನೀವು ಪಾಲಾಗಿದ್ದು ಸಾರ್. ನನಗೆ ಒಂದು ವಾರ ಹೆಚ್ಚಿಗೆ ಸಿಕ್ಕಿತು ಸಾರ್.

# ಬೇಡಾದ ಅತಿಥಿ

## ಪಾತ್ರಗಳು

೧ ಜನಾರ್ದನರಾಯರು ( ಅಭ್ಯಾಗತ )
೨ ವೆಂಕಟಲಕ್ಷ್ಮಮ್ಮ ( ರಾಯರ ಪತ್ನಿ )
೩ ದಾಸಪ್ಪ ( ದಾಸ )
೪ ವೆಂಕಟೇಶಯ್ಯ ( ಅತಿಥಿ )

೧

[ ಜನಾರ್ದನರಾಯರ ಮನೆ. ರಾಯರು ಆಫೀಸ ಮಾಡ್ತಿದ್ದಾರೆ. ಬದಿಯಲ್ಲಿದ್ದ ಆರಾಮ ಕುರ್ಚಿಯನ್ನು ವೆಂಕಟಲಕ್ಷ್ಮಮ್ಮ ಅಲಂಕರಿಸಿದ್ದಾರೆ. ದಾಸಪ್ಪ ಮನೆ ಕೆಲಸದಲ್ಲಿ ತೊಡಗಿದ್ದಾನೆ. ]

ವೆ. ಲ :— ಮೊನ್ನೆ ಏನೋ ಕಾಗದ ಬಂದ ಹಾಗೆ ಇತ್ತಲ್ಲ ವೆಂಕಟೇಶಯ್ಯ ಅವರದು ?

ಜ. ರಾ :— ಅಹುದು, ಇಷ್ಟರಲ್ಲೆ ಬರತಾರೆ ಇಲ್ಲೀಗೇನೆ.

ದಾಸ :— ಯಾರು, ವರುಷಕ್ಕೆರಡು ಸಲ ಬಂದು ಏಳೇಳು ತಿಂಗಳು ಇಲ್ಲೆ ಇರತಾರಲ್ಲ ಅವರೇ ? ಮತ್ತೆ ಬರ್ತಾರೆಯೆ ?

ಜ. ರಾ :— ಹೂ ಅವರೇ, ನಿನಗೇಕೋ ಅದೆಲ್ಲ ಅಧಿಕ ಪ್ರಸಂಗ ?

ವೆ. ಲ :— ಇರಲಿ ಬಿಡಿ, ಅವನ ಮೇಲೇಕೆ ಕೋಪ ಮಾಡ್ತೀರಾ, ಇದ್ದ ಸಂಗತಿ ಹೇಳಿದರೆ. ಅಲ್ಲ, ವೆಂಕಟೇಶಯ್ಯನವರಿಗೆ ನೀವು ಬರೀಬಾರದಾಗಿತ್ತೆ ?

ಜ. ರಾ :— ಏನು, ಈ ಊರಲ್ಲಿ ಪ್ಲೇಗು ಅಂತ ತಾನೆ!

ದಾಸ :— ಅದಕ್ಕೆಲ್ಲ ಅವರು ಭಯಪಡೋಲ್ಲಮ್ಮ, ವೈಲು ಚುಚ್ಚಿಸಿಗೊಂಡ್ರೆ ಆಯಿತು ಅನ್ತಾರೆ.

ಜ. ರಾ :— ಸರಿ, ಅದನ್ನು ಸೂಚಿಸಿದ್ದಕ್ಕೆ ಉತ್ತರ ಕೊಡಬಂದಿತು ಆಗಲೆ.

**ನೆ. ಲ**:— ಏನಂತೆ ?

**ಜ. ರಾ**:— ತಮ್ಮೂರಲ್ಲಿ ಪ್ಲೇಗು ಕಾಲರ ಕೂಡ ಇವೆ ಅಂತೆ. ಅವರು ಎರಡೂ ಕೈಗಳಿಗೆ ಎರಡರ ವ್ಯಾಲಿಯನ್ನು ಚುಚ್ಚಿಸಿಗೊಂಡಿದ್ದಾರಂತೆ.

**ದಾಸ**:— ಹಾಗಾದ ಮೇಲೆ ಅವರು ಅಲ್ಲಿಯೆ ಇದ್ದು ಬಿಡಬಹುದಲ್ಲ ನಿರ್ಭಯವಾಗಿ.

**ಜ. ರಾ**:— ನೀನು ಹೇಳು ಅವರಿಗೆ ಬಂದ ಮೇಲೆ. ಇದೇ, ತಲೆ ಹರಟೆ ಬೇಡ ಅನ್ನೋದು.

**ನೆ. ಲ**:— ಅಲ್ಲ, ಅವರಿಗೆ ಈ ಹವೆ ಸರಿಹೋಗುತ್ತೆಯೋ ಅಂತ. ಎಂಟು ದಿನಗಳಿಂದ ಬಿಸಿಲ ಮೋರೆ ಸಹ ಇಲ್ಲವಲ್ಲ ಇಲ್ಲಿ. ಅನುಗಾಲವೂ ಮೋಡ ಮುಸುಕಿರುತ್ತೆ. ಎರಡನೇ ಮಲೆನಾಡೇ ಆಗಿ ಹೋಗಿದೆ. ಸ್ವಲ್ಪ ಚಳಿ ಬಿದ್ರೂ ನೋವೆ. ಕೈ, ಕಾಲು, ಕೀಲು ಕೀಲು ನೋವು ಆನ್ತಾ ಇದ್ರು.

**ಜ. ರಾ**:— ಹೌದೇ, ಅವರೂರಲ್ಲಿ ಇಪ್ಪತ್ತುನಾಲ್ಕು ಗಂಟೇನೂ ಕಂಭದ್ರೋಣ ಮಳೆ ಅಂತೆ.

**ನೆ. ಲ**:— ಇಲ್ಲಿಯ ರೇಷನ್ ಸಮಾಚಾರ ತಿಳಿದರೆ ಯಾರೂ ಬರೋಲ್ಲಪ್ಪ ಈ ಊರಿಗೆ ನಿಜ ಏನ್ರಿ ಅದು, ಪಕ್ಕೆ ಮನೆ ಪಾರ್ವತಮ್ಮ ಹೇಳ್ತಾ ಇದ್ರು ನೆನ್ನೆ, ಅದೇನೊ ಇನ್ನ ಮೇಲೆ ಅಳತೆ ಟೇಪಿನಿಂದ ಪ್ರತಿಯೊಬ್ಬರ ಹೊಟ್ಟೇನೂ ಅಳೆದು ಅಕ್ಕಿ ಕೊಡ್ತಾರಂತಲ್ಲ ನಿಜವೇ !

**ಜ. ರಾ**:— ಹೂ, ಮಾಡ್ತಾರೆ. ನಿಮ್ಮ ಪಾರ್ವತಮ್ಮನ ಗಂಡ ಇದ್ದಾನಲ್ಲ ಪರಮೇಶ್ವರ ಭೆಟ್ಟಿ ಗಣಪತಿ ಹೊಟ್ಟೆ ಇಟ್ಕೊಗೊಂಡು, ಅದನ್ನ ಅಳತೆ ಮಾಡ್ತಾರೆ. ಇದಕ್ಕೆ ನೋಡು ಹೆಣ್ಮಕ್ಕಳದು ಅತಿ ಪಾಂಡಿತ್ಯ ಅನ್ನೋದು. ವೆಂಕಟೇಶಯ್ಯನೂರಲ್ಲಿ ಅಕ್ಕಿ ಇಲ್ಲವಂತೆ, ಅದಕ್ಕೆ ಬರ್ತಿದಾನೆ.

**ದಾಸ**:— ಇದು ಯಾವ ಲೆಕ್ಕಾಚಾರಸ್ವಾಮಿ? ಅಕ್ಕಿ ಮಾತ್ರ ಊರಿಂದೂರಿಗೆ ಹೋಗಕೂಡದು, ಅಕ್ಕಿ ತಿನ್ನೋ ಮನುಷ್ಯರು ಮಾತ್ರ ಹೋಗಬಹುದು ! ವೆಂಕಟೇಶಯ್ಯ ಅವರು ಇಲ್ಲೀಗೆ ಬಂದ್ರೆ, ಇಲ್ಲಿಂದ ಅಲ್ಲೀಗೆ ಅಕ್ಕಿ ಹೋದಂತಾಗಿಲ್ಲ ?

**ಜ. ರಾ**:— ಸುಮ್ನೆ ಇರೊ ಸಪ್ಪ, ಅದೆಲ್ಲ ಚರ್ಚೆ ಏಕೆ ?

**ವೆ. ಲ:**— ಇಲ್ಲಿ ತರಕಾರಿ ಬ್ಲ್ಯಾಕ್ ಮಾರ್ಕೆಟ್ಟಿನಲ್ಲಿ ಸಹ ಸಿಗೋಲ್ಲ ಅಂತ ಬರೀಲಿಲ್ಲ ನೀವು?

**ಜ. ರಾ:**— ಸರಿ, ಅವರಿಗೆ ಬ್ಲ್ಯಾಕ್ ಮಾರ್ಕೆಟ್ಟೂ ಬೇಕಿಲ್ಲ, ವೈಟ್ ಮಾರ್ಕೆಟ್ಟೂ ಬೇಕಿಲ್ಲ. ಅವರೇನು ಪಥ್ಯ ಅಂತೆ ಕಣೇ. ತರಕಾರಿ, ಹಾಲು, ಮೊಸರು ಯಾವುದೂ ಕೂಡದಂತೆ. ಅವರುಂಣೋದು ಅಂದ್ರೆ ಅನ್ನ ಒಂದೇ.

**ದಾಸ:**— ಅದೂ ಬೇರೆ ತಿನುವರದು.

**ಜ. ರಾ:**— ಬಾಯಿ ಮುಚ್ಕೋ ಸಾಕು.

(ಬಾಗಿಲಲ್ಲಿ 'ಪೋಸ್ಟ್, ಪೋಸ್ಟ್' ಎಂಬ ಕರೆ)

ಹೋಗೋ ದಾಸಪ್ಪ, ಅಂಚೆಜವಾನ ಬಂದಂತಿದೆ.

**ದಾಸ:**— ಆದೀತು ಸ್ವಾಮಿ.

(ತುಸು ಹೊತ್ತು ನಿಶ್ಶಬ್ದ)

ಇದೊಂದೆ ಲಕೋಟೆ ಬಂದಿದೆ. ತೆಕ್ಕೊಳ್ಳಿ.

**ಜ. ರಾ:**— (ಕಾಗದವನ್ನು ಓದಿಕೊಂಡು) ನೆನಸಿದವರ ಮನಸಿನಲ್ಲಿಯೇ. ವೆಂಕಟೇಶಯ್ಯನದೇ ಪತ್ರ.

**ದಾಸ:**— ಇವತ್ತು ಮನಸಿನಲ್ಲಿ, ನಾಳೆ ಮನೆಯಲ್ಲಿ.

**ಜ. ರಾ:**— ನಾಳೆ ಅಲ್ಲವೋ, ಇವತ್ತೆ ರಾತ್ರಿ ರೈಲಿಗೆ ಬರ್ತಾರಂತೆ. ರೈಲ್ವೆ ಸಿಲ್ದಾಣಕ್ಕೆ ನಿನ್ನ ಕಳಿಸು ಅಂತ ಸಹ ಬರೆದಿದ್ದಾರೆ.

**ದಾಸ:**— ಬಡವನ ಮೇಲೆ ದೊಡ್ಡ ಉಪಕಾರ. ಹಾಗಾದರೆ ರಾತ್ರಿ ರೈಲಿಗೆ ಹೋಗ್ಬೇಕು ತಾನೆ ಸ್ವಾಮಿ?

**ಜ. ರಾ:**— ಇನ್ನೂ ಕೇಳ್ತೀಯಲ್ಲೋ?

**ದಾಸ:**— ಒಳ್ಳೇದು ಸ್ವಾಮಿ.

## ೨

[ರೈಲ್ವೆ ಸ್ಟೇಷನ್ನಿನಲ್ಲಿ ಗಾಡಿ ಬಂದು ನಿಲ್ಲುತ್ತಿದೆ. ದಾಸಪ್ಪ ವೆಂಕಟೇಶಯ್ಯನವರನ್ನು ಹುಡುಕುತ್ತಿದ್ದಾನೆ. ಎಲ್ಲೆಲ್ಲಿಯೂ ಗಲಾಟೆ.]

**ವೆಂಕ:**— (ದರ್ಪದಿಂದ) ಏ ದಾಸ, ದಾಸ, ಬಾರೋ ಇಲ್ಲಿ.

**ದಾಸ:**— ಬಂದೆ ಸ್ವಾಮಿ, ಬಂದೆ.

**ವೆಂಕ:**— ಓಡೋಕಾಗಲ್ವೇನೋ?

**ದಾಸ**:— ಪೈಲಿ ನಿಲ್ತಿದೆ, ನಾನೇಕೆ ಓಡಬೇಕು ಅಂತ ಓಡಲಿಲ್ಲ ಸ್ವಾಮಿ. ಅಲ್ಲದೆ ಮೂರು ದಿನದಿಂದ ಹೊಟ್ಟೇಲಿ ಅನ್ನ ಬೇರೆ ಇಲ್ಲ.

**ವೆಂಕ**:— (ಬೆಚ್ಚಿಬಿದ್ದು) ಅದೇಕೊ ಅನ್ನವಿಲ್ಲ?

**ದಾಸ**:— ಎಲ್ಲಿದೆ ಸ್ವಾಮಿ ಅಕ್ಕಿ? ಮನೇಲಿ ರಾಯರಿಗೇ ಅಕ್ಕಿ ಇಲ್ಲ. ಮಾರ್ಕೆಟ್ಟು ಎಲ್ಲ ಖಾಲಿ ಸ್ವಾಮಿ.

**ವೆಂಕ**:— ಮತ್ತೇನೋ ಅವರುಣ್ತಾ ಇರೋದು?

**ದಾಸ**:— ಬರೀ ಗೋದಿ ಸ್ವಾಮಿ, ಜವೆಗೋದಿ.

**ವೆಂಕ**:— ತುಂಬ ಒಳ್ಳೆದಾಯ್ತು ಬಿಡು. ಅಕ್ಕಿ ತಿಂದರೆ ಅದೇನೊ ರೋಗ ಬರುತ್ತಂತೆ. ಬರೀ ಗೋದೀನೆ ತಿನ್ನು ಅಂತ ಡಾಕ್ಟರು ಹೇಳಿದ್ದಾರೆ. ಕಾಯಿಪಲ್ಲೆ ಕೇಳಿದಷ್ಟು ಸಿಗುತ್ತೆ ತಾನೆ?

**ದಾಸ**:— ಮನೆ ಮುಂದೆ ದೊಡ್ಡ ಅಶ್ವಥ್ಥ ವೃಕ್ಷ ಇದೆ. ಅರಳಿ ಎಲೆ, ಬೇವಿನ ಕಾಯಿ, ಕಾಯಿಪಲ್ಲೆ ಅಂದರೆ.

**ವೆಂಕ**:— ಅಲ್ಲವೋ, ಮನೇಲಿ ಹಾಲು ಹೈನಿಗಂತೂ ತಾಪತ್ರ ಇಲ್ಲ ತಾನೆ?

**ದಾಸ**:— ಎಲ್ಲಿ ಹೈನು ಸ್ವಾಮಿ. ಸತ್ತ ದನಕ್ಕಿದ್ದ ಬೆಲೆ ಈಗ ಬದುಕಿದ ಮನುಷ್ಯರಿಗಿಲ್ಲ. ಹಸುವಿನ ಕೆಚ್ಚಲು ಕೊಯ್ದು ಗೌಳಿ ಇದ್ದಿದ್ರೆ ಈಗ ನಿಜವಾಗಲೂ ಧನಿಕನಾಗ್ತಿದ್ದ ಪಾಪ.

**ವೆಂಕ**:— ನಿನ್ನ ಕಂತೆ ಪುರಾಣ ಹಾಗಿರಲಿ, ಚೆನ್ನಾಗಿ ಬಿಸಿಲಾದರೂ ಕಾಯುತ್ತೋ ಇಲ್ಲವೋ?

**ದಾಸ**:— ಈಗೆಲ್ಲಿ ಬಿಸಿಲು ಸ್ವಾಮಿ?

**ವೆಂಕ**:— (ಬೇಜರದಿಂದ) ಈಗ ಅಂದರೆ ರಾತ್ರಿ ಅಲ್ವೊ. ಹಗಲು, ಹಗಲೂ.

**ದಾಸ**:— ಹಗಲು ಮಾತ್ರ ಎಲ್ಲಿದೆ ಸ್ವಾಮಿ ಬಿಸಿಲು. ಬಿಸಿಲ ಮೋರೆ ನೋಡದೆ ತಿಂಗಳಾಯ್ತು. ಮುಚ್ಚಿದ ಮೋಡ ಮುಚ್ಚೇ ಇದೆ. ಊರಲ್ಲೆಲ್ಲ ಪ್ಲೇಗು. ಸಾಲದ್ದಕ್ಕೆ ಈ ದಪ್ಪನ್ನ ಅಕ್ಕಿ ತಿಂದು ಜನಕ್ಕೆಲ್ಲ ಕಾಯಿಲೆ.

**ವೆಂಕ**:— ಅಕ್ಕೀನೆ ಸಿಗೋಲ್ಲ, ಬರೀ ಗೋದೀನೆ ತಿನ್ನೋದು ಅಂದೆಲ್ಲವೋ.

**ದಾಸ:**— ಛೇ ಛೇ, ಬರೀ ಗೋದಿ ಅಲ್ಲ ಸ್ವಾಮಿ. ಅಕ್ಕಿ ಅನ್ನೋಕೆ ಗೋದಿ ಅಂದಿರಬಹುದು.

**ವೆಂಕ:**— ಒಳ್ಳೇದಾಯಿತು ಬಿಡು. ಗೋದಿ ತಿಂದರೆ ಅದೇನೊ ರೋಗ ಬರುತ್ತೆ, ಬರೀ ಅಕ್ಕೀನೆ ತಿನ್ನು ಅಂತ ವೈದ್ಯರು ಹೇಳಿದರು. ಅದಿರಲಿ, ರಾಯರ ಮನೇಲಿ ಎಲ್ಲರೂ ಚೆನ್ನಾಗಿದ್ದಾರೆಯೆ?

**ದಾಸ:**— ಎಲ್ಲರೂ ಇದ್ದಾರೆಯೆ ಅಂತ ಕೇಳಿ ಅಷ್ಟೆ. ಚೆನ್ನಾಗಿ ಅನ್ನೊ ಪ್ರಶ್ನೆ ಬೇಡ.

**ವೆಂಕ:**— ಯಾಕೋ ಯಾರಿಗೇನಾಗಿದೆಯೋ?

**ದಾಸ:**— ಹಗಲೆಲ್ಲ ತಲೆ ಸಿಡಿಯುವಂತಹ ಬಿಸಿಲಿನ ತಾಪ; ರಾತ್ರಿಯೆಲ್ಲ ತಿಗಣೆ ಸೊಳ್ಳೆ ಕಾಟ, ಅಂತೂ ನಿದ್ರೆ ಇಲ್ಲ.

**ವೆಂಕ:**— ಬಿಸಿಲ ಮುಖ ನೋಡದೆ ತಿಂಗಳಾಯ್ತು ಅಂತ ಹೇಳಿದಿಯಲ್ಲೊ ಈಗ.

**ದಾಸ:**— ಛೆ, ಛೆ, ಅದು ಮನೆ ಒಳಗಿನ ಸಮಾಚಾರ ಸ್ವಾಮಿ ನಾನು ಹೇಳಿದ್ದು.

**ವೆಂಕ:**— ಅಂದರೆ ?

**ದಾಸ:**— ಬಿಸಿಲಿನ ರಸ್ಮೆ ಸಹ ಬೀಳವಂತಹ ಮನೇಲಿದ್ದಾರೆ ಅಂತ ಅಂದೆ. ಹೋಗಲಿ ಬಿಡಿ, ನಿಮ್ಮನೇಲೆಲ್ರು ಸೌಖ್ಯ ತಾನೆ ಸ್ವಾಮಿ?

**ವೆಂಕ:**— ಸೌಖ್ಯಾನೆ ಬಿಡು. ಆದರೆ ನನಗೆ ಮಾತ್ರ ಆ ಮನೇಲಿ ಅರ್ಧ ನಿಮಿಷ ಸಹ ಇರಲಿಕ್ಕಾಗಲಿಲ್ಲ. ಆದಕ್ಕೆ ಇಲ್ಲಿಗೆ ಓಡಿ ಬರಬೇಕಾಯಿತು

**ದಾಸ:**— ಅಂತಹದೇನಾಯ್ತು ಸ್ವಾಮಿ ಮನೇಲಿ?

**ವೆಂಕ:**— ನಿನಗೆ ಗೊತ್ತಿದೆಯಲ್ಲೊ, ನನಗೆ ಅನುಗಾಲವು ನಿಶ್ಶಬ್ದವಾಗಿರಬೇಕು. ಕೊಂಚ ಗಲಾಟೆಯಾದರೆ ತಲೆನೋವು ಬಂದುಬಿಡುತ್ತೆ. ಅದರಲ್ಲೂ ಕೂಸು ಕುನ್ನಿಗಳು ಅಳ್ತಾ ಇದ್ರಂತೂ ನನಗೆ ಹುಚ್ಚೆ ಹಿಡಿಯುತ್ತೆ. ನಮ್ಮ ಮನೇಲಿ ಎರಡನೇ ಸೊಸೆ ಹೆರಿಗೆ ಆಗಿದೆ. ಹೆಣ್ಣು ಕೂಸು ಬೇರೆ. ರಾಕ್ಷಸಿ ಇಪ್ಪತ್ನಾಲ್ಕು ಗಂಟೇನೂ ತೆಗದ ಬಾಯಿ ಮುಚ್ಚೋಲ್ಲ ಆ ಮಗು. ಅದರ ಆ ಚೀರಾಟ ತಟ್ಟಿಗೊಳ್ಳಾರದೆ ಮನೇಲಿ ಹೇಳ್ದೆ ಕೇಳ್ದೆ ಬಂದು ಬಿಟ್ಟೆ ನೋಡು.

**ದಾಸ**:— ದೇವರಿದ್ದಾನೆ ಬಿಡಿ.

**ವೆಂಕ**:— ಇನ್ನೂ ಬಹಳ ದೂರವೇನೋ ಅವರ ಮನೆ.

**ದಾಸ**:— ಅಗೋ, ಬಂದೇಬಿಟ್ಟಲ್ಲ ಸ್ವಾಮಿ. ಆ ಎದುರು ಮನೇನೆ ಅವರದು.

೩

[ ಜನಾರ್ಧನರ ಮನೇಲೊಂದು ಕೋಣೆ. ವೆಂಕಟಲಕ್ಷ್ಮಮ್ಮ ಕುಳಿತಿದ್ದಾಳೆ. ಅಳುತ್ತಿರುವ ಚಿಕ್ಕ ಮಗುವನ್ನೊಂದು ಎತ್ತಿಕೊಂಡು ದಾಸಪ್ಪ ಬರುತ್ತಾನೆ. ]

**ವೆ. ಲ**:— ಅದಾರದೋ ದಾಸಪ್ಪ ಆ ಮಗು. ಅಳ್ತಾ ಇರೋದನ್ನೆ ಎತ್ತಿಕೊಂಡು ಬಂದಿದೀಯಾ.

**ದಾಸ**:— ವೆಂಕಟೇಶಯ್ಯನವರದಮ್ಮ.

**ವೆ. ಲ**:— ಏನು, ವೆಂಕಟೇಶಯ್ಯನವರದೇ!

**ದಾಸ**:— ಉಶ್, ಶ್, ಸ್ವಲ್ಪ ಮೆತ್ತಗೆ ಮಾತನಾಡಿ.

**ವೆ. ಲ**:— ತಾಯಿನ್ನ ಅಗಲಿಸಿ ಅದನ್ನೇಕೋ ತಂದಿದಾರೆ?

**ದಾಸ**:— ಇದಕ್ಕೆ ತಾಯಿ ಗೀಯಿ ಅಂತ ಆದಾವುದೂ ಇಲ್ಲಮ್ಮ. ಬರುವಾಗ ರೈಲಿನಲ್ಲಿ ಅದಾರೋ ಬಡವರು ಈ ಮಗೂನ್ನ ಮಾರಲು ತಂದಿದ್ರಂತೆ. ಅವರಿಗೇನು ಕಡಿಮೆ ಹೇಳಿ, ದೇವರು ಮರೆತು ಕೊಟ್ಟಿದ್ದಾನೆ, ವೆಂಕಟೇಶಯ್ಯನವರಿಗೆ. ಮೊದಲೇ ಹೆಣ್ಣುಗರಳಿನವರು ಬೇರೆ. ತಮ್ಮ ಮಕ್ಕಳ ಜತೇಲಿ ಇದೂ ಒಂದಿರುತ್ತೆ ಅಂತ ಹೇಳಿ ಕೊಂಡುಬಿಟ್ರಂತೆ. ಈ ಮಗು ತಮ್ಮದೇ ಅಂತ ಹೇಳ್ತಾ ಇದ್ದಾರೆ. ಆದರೆ ಒಂದು ವಿಷಯ ಅಮ್ಮ?

**ವೆ. ಲ**:— ಏನೋ ದಾಸಪ್ಪ ಅದು?

**ದಾಸ**:— ಈ ಮಗೂನ ಬಗ್ಗೆ ನೀವ್ಯಾವ ಮಾತನ್ನೂ ವೆಂಕಟೇಶಯ್ಯನವರ ಮುಂದೆ ಎತ್ತಲೇ ಕೂಡದು. ಏಕೆ ಅಂದರೆ ಅವರು ಮನಸ್ಸಿಗೆ ಏನಾದರೂ....

**ವೆ. ಲ.**:— ಛೆ, ಛೆ, ಪಾಪ, ನನಗೇಕೆ ಬೇಕಪ್ಪ ಆ ಗೋಜು?

**ದಾಸ**:— ಅಲ್ಲಮ್ಮ. ಮಗು ಹೆಚ್ಚು ಅಳುತ್ತೆ ಅಂತ ಸಹ ಅನಕೂಡ ವಾಗಿದೆ. ಸಂದರ್ಭ: ಈ ವಿಷಯ ರಾಯರಿಗೂ ಕೂಡ ಸ್ವಲ್ಪ ಸೂಕ್ಷ್ಮವಾಗಿ ತಿಳಿಸಿಬಿಡಿ.

ವೆ. ಲ :— ಅಗತ್ಯ ಹೇಳ್ತೀನೆ ದಾಸಪ್ಪ, ಅದಕ್ಕೇಕೆ ಸಂಕೋಚ ?

ದಾಸ :— ಬೇರೆ ಇನ್ನೇನಿಲ್ಲ ಅನ್ನಿ. ರಾಯರೇನಾದರೂ ಈ ವಿಷಯ ವೆಂಕಟೇಶಯ್ಯನವರೊಟ್ಟಿಗೆ ಪ್ರಸ್ತಾಪಿಸಿದರೆ ವೃಥಾ ಅವರ ಮನಸ್ಸು ನೋಯಿಸಿದಂತಾಗುತ್ತೆ. ಪಾಪ, ಎಂಥವರಾದರೇನು ಮನೆಗೆ ಬಂದವರು ಸುಳ್ಳೇ ?

ವೆ. ಲ :— ಚಲ್ಲವೇ ಪಾಪ, ಇರು, ಈಗಲೆ ಅವರಿಗೆ ಹೇಳಿ ಬಿಟ್ಟು ಬರ್ತೀನೆ

ದಾಸ :— ಹೋಗಿ ಬನ್ನಿ. ನಾನೂ ವೆಂಕಟೇಶಯ್ಯನವರ ಬಳಿಗೆ ಹೋಗಿ ಬರುತ್ತೇನೆ. ಅವರಾಗಲೆ ಮಗೂನ್ನ ಕೇಳಿದರು.

( ಕೂಸು ಅಳುತ್ತಿರುವದು. )

ವೆಂಕ :— ಏ ದಾಸ, ಈ ಅಳೋ ಮಗೂನ್ನ ಎಲ್ಲಿಂದಾನೋ ತಂದಿ ? ಯಾರದೋ ಇದು ?

ದಾಸ :— ಉಶ್, ಶ್, ಸ್ವಲ್ಪ ಮೆತ್ತಗೆ ಮಾತನಾಡಿ ಈ ಮಗೂನ ವಿಷಯ ಇದು ರಾಯರದೇ.

ವೆಂಕ :— ಏನು, ರಾಯರದೇ ?

ದಾಸ :— ಹೌದು ಸ್ವಾಮಿ. ಅಂದರೆ ಕೊಂಡದ್ದು, ಸಾಕಿಕೊಂಡದ್ದು. ಅಮ್ಮಾವರಿಗೆ ಮಕ್ಕಳಾಗಲಿಲ್ಲ ಅಂತ ಅದೇ ಒಂದು ಮನೋರೋಗವೇ ಆಗಿತ್ತು. ರಾಯರಿಗೂ ಸಹ ಅಷ್ಟೇ ಅನ್ನಿ. ಒಂದು ದಿನ ಹೀಗೆ ಯಾರೋ ಬಡವರು—ಕಷ್ಟಕಾಲ ನೋಡಿ ಇದು—ಅನ್ನಕ್ಕಿಲ್ಲದೆ ಮಗೂನ್ನ ಮಾರಾಟಕ್ಕೆ ತಂದಿದ್ದರು. ನಾನು ಬೇಡ ಅಂತ ಎಷ್ಟೋ ಹೇಳಿದೆ ಅನ್ನಿ, ನನ್ನ ಮಾತಿಗೆ ಬೆಲೆ ಇದೆಯೇ ಈ ಮನೇಲಿ? ರೂಪಾಯಿಗಳನ್ನು ಕೊಟ್ಟು ಕೊಂಡೇ ಬಿಟ್ಟರು. ಮುಖ್ಯ ನನ್ನ ಪ್ರಾಣದ ಮೇಲೆ ಬಂದಿದೆ ನೋಡಿ. ಈ ದರಿದ್ರ ಮಗೂನ ವಿಷಯ ಯಾರಾದರೂ ಮಾತನಾಡಿದರಂತೂ ರಾಯರು ಕಿಡಿ ಕಿಡಿ ಆಗಿಬಿಡ್ತಾರೆ. ನೀವು ಮತ್ತೇನಾದರೂ ಬಾಯಿ ಜಾರಿ ಕೇಳಿಬಿಟ್ಟೀರಾ ಆಮೇಲೆ? ಒಂದು ಹೋಗಿ ಇನ್ನೊಂದು ಆಗಿ ಬಿಟ್ಟೀತು.

ವೆಂಕ :— ನನಗೇಕೆ ಬೇಕು ಬಿಡು, ಅವರ ಗೃಹಕೃತ್ಯದ ವಿಷಯ. ಸಧ್ಯ ನೀನು ಮುಂಚಿತವಾಗಿ ಹೇಳಿದ್ದು ಒಳ್ಳೇದಾಯ್ತು. ಪಾಪ, ಅವರ

ಮನಸ್ಸು ನಾನೇಕೆ ನೋಯಿಸಲಿ. ಅದೆಲ್ಲ ಸರಿ, ಈ ಮಗು ರಾತ್ರಿ ಅಳು ತ್ತೇನೋ ?

**ದಾಸ:**— ಚೆನ್ನಾಗಿ ಕೇಳಿದಿರಿ ಸ್ವಾಮಿ. ಮಗು ಅಳುತ್ತೇನ ಅಂದ್ರೆ ಏನನ್ನೋ ಮಾತು ಸ್ವಾಮಿ ? ಅದರಲ್ಲೂ ತಾಯಿಯ ಹಾಲಿಲ್ಲದೆ ಬೆಳೀತಿದೆ. ಅವರಿದುರಿನಲ್ಲಿ ಕೂಸು ಬಹಳ ಅಳುತ್ತೆ ಅಂದು ಬಿಟ್ಟೇರಾ ಸಧ್ಯ.

**ತಂದೆ:** – ಅನ್ನೋಲ್ಲ ಬಿಡು. ಆದರೆ ರಾತ್ರಿ ಎಲ್ಲ ಮಗು ಅಳ್ತಾ ಇದ್ದರೆ—

೪

[ ಮಧ್ಯರಾತ್ರಿ ಸಮಯ. ವೆಂಕಟೇಶಯ್ಯ ನಿದ್ರೆ ಬಾರದೆ ಹಾಸಿಗೆಯಲ್ಲಿ ಎದ್ದು ಕುಳಿತಿದ್ದಾನೆ. ತಿಗಣೆ ಸೊಳ್ಳೆಗಳ ಕಾಟ. ಕೂಸು ಚೀರಿ ಅಳುತ್ತಲಿದೆ. ದಾಸಪ್ಪ ಗೊರಿಕೆ ಹೊಡೆಯುತ್ತಲಿದ್ದಾನೆ. ]

**ವೆಂಕ:**— ಅಬ್ಬ, ಇದೇನು ಪಿಶಾಚಿಯ ಹಾಗೆ ಚೀರುತ್ತಿದೆಯಲ್ಲ ಇದೂ. ದಾಸ, ದಾಸ, ಏ ದಾಸಾ.

**ದಾಸ:**— ಸ್ವಾಮೀ.

**ವೆಂಕ:**— ಮಗೂ ಅಳ್ತದೆ ನೋಡೋ, ಸಮಾಧಾನ ಮಾಡಕೂಡದೆ ಪಾಪ. ( ಮೆಲು ದನಿಯಲ್ಲಿ ) ಜನಾರ್ದನರಾಯನೇಕೆ ಈ ದರಿದ್ರ ಮಗೂನ್ನ ತೆಗೆದುಕೊಂಡನೋ ನಾನು ಬೇರೆ ಕಾಣೆ. ನಾನು ಈ ಮನೇಲಿ ಕಾಲಿಟ್ಟಾಗಿನಿಂದ ನೋಡ್ತಾ ಇದ್ದೇನೆ. ಅಳ್ತಾನೆ ಇದೆ. ಏಳೋ ದಾಸಪ್ಪ, ಮಗೂನ್ನ ಕೊಂಚ ಸಮಾಧಾನ ಮಾಡು

( ಮಗೂ ಹಾಗೆಯೇ ಅಳುತ್ತಲೇ ಇದೆ. )

**ವೆ. ಲ:**— ಇದು ಏನ್ರೀ ಅನಿಷ್ಟ ಮನೇಲಿ. ದಿವಸ ಇಪ್ಪತ್ನಾಲ್ಕು ಗಂಟೇನೂ ಚೀರ್ತಾನೆ ಇದೆಯಲ್ಲ ಈ ಮಗು. ಈ ವೆಂಕಟೇಶಯ್ಯನಿಗೇಕೆ ಬುದ್ಧಿ ಹೋಯ್ತೋ ಕಾಣೆ.

**ಜ. ರಾ:**— ಎಷ್ಟು ಗಟ್ಟಿಯಾಗಿಯೇ ಮಾತನಾಡೋದು. ಅಕಸ್ಮಾತ್ ಅವರ ಕಿವೀಗೆ ಬಿದ್ರೆ, ಅವರೇನು ತಿಳಿದುಕೊಳ್ಳಬೇಕು ? ಏ ದಾಸಪ್ಪ, ದಾಸಪ್ಪಾ, ಮಗೂ ಅಳ್ತದೆ ನೋಡೋ. ಏಳೋ, ದಾಸಪ್ಪ.

( ಇನ್ನೂ ಹೆಚ್ಚೆಚ್ಚು ಚೀರುವದು. )

**ವೆಂಕ:** – ಏನು ಚೀರುತ್ತಲ್ಲ ಇದು, ಅಯ್ಯೋ. ಅಮ್ಮಾ, ತಲೆಯೇ,

ತಲೆ ಹೊಡಿಯುತ್ತಲ್ಲಪ್ಪೋ. ಏನು ರಾಕ್ಷಸೀ ಮಗೂನೊ ಇದು. ನಮ್ಮ ನೇಲೆ ಮೇಲಲ್ಲೋ ಎಂತಹ ಉಭಯ ಸಂಕಟದಲ್ಲಿ ಬಿದ್ದೆನಲ್ಲ ನಾನು. ದಾಸ, ದಾಸಾ,

**ದಾಸ:—** ಸ್ವಾಮಿ..

**ವೆಂಕ:—** ಆ ಮಗೂ ಸುಮ್ನೆ ಆಗಲ್ವೇನೋ?

**ದಾಸ:—** ಅದೇನು ಸುಮ್ಮನೆ ಆಗುತ್ತೆ ಸ್ವಾಮಿ. ದಿನಾಲು ಇದೇ ಗತಿಯೆ. ಹೀಗೆಯೇ ಚೀರಿ ಚೀರಿ ಪ್ರಾಣ ಕಳಕೊಳ್ಳುತ್ತೆ.

**ದಾಸ:—** ಪ್ರಾಣ ಕಳೆದುಕೊಳ್ಳೋದಿಲ್ಲೊ ಅದು, ನಮ್ಮ ಪ್ರಾಣ ಕಳೆಯುತ್ತೆ. ಅಬ್ಬಬ್ಬ ತಲೆ ಸಿಡಿಯುತ್ತಲ್ಲೊ. ದಾಸ.

**ದಾಸ:—** ಸ್ವಾಮಿ.

**ವೆಂಕ:—** ನಮ್ಮೂರಿಗೆ ಈಗ ಗಾಡಿ ಇದೆ ಏನೋ?

**ದಾಸ:—** ಒಂದಿದೆ ಸ್ವಾಮಿ, ಯಾಕೆ ಸ್ವಾಮಿ ಗಾಡಿ ಕೇಳ್ತೀರಾ?

**ವೆಂಕ:—** ನನಗೊಂದು ಉಪಕಾರ ಮಾಡ್ತೀಯಾ ಹಾಗಾದರೆ?

**ದಾಸ:—** ಅಯ್ಯೋ ನನ್ನೊಡೆಯಾ, ನಿಮಗೆ ಇಲ್ಲ ಅಂದೇನೆ?

**ವೆಂಕ:—** ಇಲ್ಲಿ ನೋಡು, ಈ ರಾತ್ರಿ ನಾನಿಲ್ಲೆ ಇದೆ, ತಲೆ ಸಿಡಿದು ನನ್ನ ಪ್ರಾಣಾನೆ ಹೋಗುತ್ತೆ. ಈ ಗಾಡಿಗೆ ನಾನು ಊರಿಗೆ ಹೋಗಿಬಿಡ್ತೀನೆ.

**ದಾಸ:—** ಅಯ್ಯೊ,

**ವೆಂಕ:—** ಹೌದೋ ದಾಸ, ನೀನು ಮಾತ್ರ ಬೆಳಗ್ಗೆ ನಿಮ್ಮ ರಾಯರಿಗೆ ಏನಾದರೂ ಸುಳ್ಳು ಹೇಳಿ ನನ್ನ ಮಾನ ಉಳಿಸು.

**ದಾಸ:—** ಸುಳ್ಳು ಏಕೆ, ನಿಜಾನೆ ಹೇಳ್ತೀನಿಬಿಡಿ.

**ವೆಂಕ:—** ಏನಂತ?

**ದಾಸ:—** ತಮ್ಮ ಮನೇಲಿ ಹುಟ್ಟಿರೋ ಮಗೂನ ನೆನಪಾಯ್ತು, ಅದಕ್ಕೆ ಊರಿಗೆ ಹೋದರು ಅಂತ.

**ವೆಂಕ:—** ನಿಜವಾಗಿ ಆಗಿದೆಯೋ ನಾನು ಹೊರಟೆ ದಾಸ ರೈಲಿಗೆ.

**ದಾಸ:—** ಒಬ್ಬರೇ ಹೋಗ್ತೀರಾ?

**ವೆಂಕ:—** ಪರವಾ ಇಲ್ಲ. ನೀನು ಬಂದರೆ ಮತ್ತೆ ಕೂಸಿನ್ನ ತಕ್ಕೊಂಡು ತಾನೇ ಬರಬೇಕು? ನಾನು ಹೊರಟೆ, ಬೆಳಗ್ಗೆ ರಾಯರಿಗೆ ಹೇಳಿಬಿಡು.

**ದಾಸ:—** ನಮಸ್ಕಾರ ಸ್ವಾಮಿ.

( ರೈಲು ಹೊರಡುವದು. )

**ವೆ. ಲ:—** ಏನ್ರೀ, ವೆಂಕಟೇಶಯ್ಯನವರು ಎಲ್ಲಿ? ಇಲ್ಲೇ ಇಲ್ವಲ್ಲ,

**ಜ. ರಾ:—** ಇಲ್ವೆ! ನನಗೆ ತಾನೆ ಏನುಗೊತ್ತು? ಎಲ್ರೋ ದಾಸ ವೆಂಕಟೇಶಯ್ಯನವರು?

**ದಾಸ:—** ಯಾರು, ವೆಂಕಟೇಶಯ್ಯನವರೇ? ರಾತ್ರಿ ಗಾಡಿಗೆ ಅವರೂರಿಗೆ ಹೋಗಿ ಬಿಟ್ರಲ್ಲ ಸ್ವಾಮಿ.

**ವೆ. ಲ:—** ಏನು, ಊರಿಗೆ ಹೋಗಿಬಿಟ್ರೆ! ಅದೇಕೋ? ಮಗು?

**ದಾಸ:—** ಮಲಗಿದೆಯಮ್ಮ.

**ಜ. ರಾ:—** ಮಗೂನ್ನೇಕೋ ಇಲ್ಲಿಯೇ ಬಿಟ್ಟಿಟ್ಟು ಹೋದರು?

**ದಾಸ:—** ಅವರದಲ್ಲ ಸ್ವಾಮಿ ಮಗು.

**ವೆ. ಲ:—** ಅವರದಲ್ಲ! ಅವರದು ಅಂತ ಹೇಳಿದಲ್ರೊ ನನಗೆ.

**ದಾಸ:—** ಅವರ ಮುಂದೆ ನಿಮ್ಮದು ಅಂತ ಹೇಳಿದ್ದೆ ಅಮ್ಮ.

**ವೆ. ಲ:—** ಏನು, ನನ್ನದು ಅಂತಾನೆ?

**ದಾಸ:—** ಇಲ್ಲದಿದ್ದರೆ, ಅವರು ಹೋಗೋರಾ? ಮಗೂನ ಚೀರಾಟ ತಟ್ಟಿಗೊಳ್ಳಾರದೆ ಬಾಯಿಂದ ಅನಲಾರದೆ ಊರಿಗೆ ರಾತ್ರೀನೆ ಹೊರಟು ಹೋದರು.

**ಜ. ರಾ:—** ಅದಿರಲಿ ಸದ್ಯ, ಈ ಮಗು ಯಾರದೋ.

**ದಾಸ:—** ನನ್ನದೇ ಸ್ವಾಮಿ.

---

( ಪಿ. ಜಿ. ಓಡ್‌ಹೌಸ್‌ನ 'ವೈಮಾನ್ ಜೀವ್ಸ್' ನನ್ನು ಅತಿಕ್ರಮಿಸಿ ಬರೆದುದು. )

# ಸೈಕಾಲಜಿಸ್ಟ್ ಸಾರಂಗಪಾಣಿ

●

## ಪಾತ್ರಗಳು

೧ ಗೋಪು (ಕಾಯಿಲೆ ಹೆಂಡತಿಯ ಗಂಡ)
೨ ಶ್ರೀರಂಗಮ್ಮ (ಗೋಪೂನ ಹೆಂಡತಿ)
೩ ರಾಜು (ಇವರ ಮಗು)
೪ ಸಾರಂಗಪಾಣಿ (ಸೈಕಾಲಜಿಸ್ಟ್)
ಮತ್ತು ಹಲವು ಇತರರು.

[ಗೋಪೂನ ಮನೆ. ಅವರು ಮನೇಲಿಲ್ಲ. ಹೆಂಡತಿ ಶ್ರೀರಂಗಮ್ಮ ಕಾಯಿಲೆಯಿಂದ ನರಳುತ್ತ ಮಲಗಿದ್ದಾರೆ. ಅವರ ಮಗು ರಾಜು ದೀಪದ ಮುಂದೆ ಕುಳಿತು ಓದುತ್ತಿದ್ದಾನೆ.]

**ಶ್ರೀ:**— (ನರಳುತ್ತ) ಆ....ಆ....ಆ ...ಏನೋ ನೀನು ಮಾಡ್ತಾ ಇರೋದು! ರಾಜೂ, ನಿನಗೆಷ್ಟು ಸಲ ಹೇಳ್ಬೇಕೋ ದೀಪ ಹಚ್ಚಿದ ಕೂಡಲೆ ಪುಸ್ತಕ ತೆಗೆದುಕೊಂಡು ಓತ್ತಾ ಕೂಡು ಅಂತ ...ವೂ ...ವೂ....ವೂ....

**ರಾ:**— ಓತ್ತಾ ಇದ್ದೀನಮ್ಮ.

**ಶ್ರೀ:**— ಏನೋ ಓತ್ತಾ ಇದ್ದೀಯಾ ಮಗು, ಒಂದು ತುಟಿ ಎರಡು ಮಾಡದೆ.... ವೂವೂವೂ....ಬೆಲ್ಲ ಜಜ್ಜಿದ ಕಲ್ಲಿನಂತೆ ಕುಳಿತಿದ್ದೀಯಾ.

**ರಾ:**— ಮನಸಿನಲ್ಲೆ ಓತ್ತಾ ಇದ್ದೀನಮ್ಮ.

**ಶ್ರೀ:**— ಇದು ಬೇರೆ ಶುರು ಮಾಡಿ ಬಿಟ್ಟೆಯಾ ನೀನು ಹೊಸದಾಗಿ, ಗಟ್ಟಿಯಾಗಿ ಓದು ಮಗೂ, ಚೆನ್ನಾಗಿ ಮನಸಿಗೆ ಹತ್ತುತ್ತೆ. ಹೂ....ಓದು ಗಟ್ಟಿಯಾಗಿ.

**ರಾ:**— (ಗಟ್ಟಿಯಾಗಿ) ರಾಮಯ್ಯಾ, ನೋಡಿದಿಯಾ, ಈ ಬಾಳೆಯ ತೋಟವನ್ನು ?

ಶ್ರೀ :— ನಿಲ್ಲಿಸೋ, ರಾಜು ನಿಲ್ಲಿಸೋ. ಏನೋ, ಅನ್ಯಾಯ ಇದು. ಕೈಯಲ್ಲಿ ಇಂಗ್ಲೀಷು ಪುಸ್ತಕ ಹಿಡಿದುಕೊಂಡು ಕನ್ನಡ ಓತ್ತಾ ಇದ್ದೀಯಲ್ಲೋ. ಕಣ್ಣು ಬೇರೆ ಮುಚ್ಚಿಗೊಂಡಿದ್ದೀಯಾ.

ರಾ :— ಅರ್ಥ ಹೇಳಿಕೊಳ್ತಾ ಇದ್ದೀನಮ್ಮ.

ಶ್ರೀ :— ನನ್ನ ತಲೆ. ಇದೆಲ್ಲ ಬೇಡಪ್ಪಾ ಸದ್ಯ. ನೊನ್ನೆ ಅವರು ಹೇಳಿಕೊಟ್ರಲ್ಲ. ಆ ಪಾಠ ಓದಿಕೋ ಮಗು, ಸುಮ್ನೆ ಏಟು ತಿಂದೀಯಲ್ಲೋ ರಾಜು. ಹೂ, ಓದು; ಆ ಪಾಠ.

ರಾ :— ಎಮ್....ಎ....ಟಿ—ಕ್ಯಾಟ್ — ಇಲಿ. ಎಮ್... ಎ... ಟಿ— ಕ್ಯಾಟ್— ಇಲಿ.

ಶ್ರೀ :— ಹಾ....ಹಾಗೆ ಓದಿಕೊಳ್ಳಪ್ಪ ಮಗು. ಇಂಗ್ಲೀಷು ಓದಿ ಜಾಣ ಆಗು. ವರ್ಷಾ ವರ್ಷಾ ಪ್ಯಾಸಾದರೆ, ಅವರು ಹೇಗಾದರೂ ಮಾಡಿ ನಿನ್ನ ಬಿ. ಎ. ವರಿಗೂ ಓದಿಸ್ತಾರೆ. ಸಂಸಾರದ ತಾಪತ್ರ ಇದ್ದೇ ಇರುತ್ತೆ. ಜೀವ ಒತ್ತೆ ಇಟ್ಟಾದರೂ ನಿನ್ನ ಓದಿಸ್ತಾರೆ. ಬರೀ ಅದನ್ನೆ ಓತ್ತಾ ಇದ್ದಿಯಾ ರಾಜು. ಮುಂದಿನ ಪಾಠ ಓದು

ರಾ :— ಆರ್....ಎ... ಟಿ— ಮ್ಯಾಟ್ — ಬೆಕ್ಕು. ಆರ್....ಎ ... ಟಿ—ಮ್ಯಾಟ್—ಬೆಕ್ಕು.

ಶ್ರೀ :— ಇದೇನು ಓದ್ದೋ ರಾಜು? ಓದು ಅಂದಕೂಡಲೆ ಬೆಕ್ಕು ಇಲಿ ಅಂತಾನೆ ಶುರು ಮಾಡ್ಬಿಟ್ಟೀಯಾ. ಬಹಳ ಚನ್ನಾಗಿದೆಪ್ಪ ನಿನ್ನ ಇಂಗ್ಲೀಷು! ಬೆಕ್ಕು ಇಲಿ ಪಾಠ ಓದಿಬಿಟ್ಟು ಬೆಕ್ಕು ಇಲಿ ಹಾಗೆ ಕಾದಾಡ್ತಾ ಇರೋದಾ? ಹೂ, ಸರಿ, ಓದಿಕೋ. ಅವರು ಇನ್ನೂ ಬರಲಿಲ್ಲವೇನೋ ರಾಜು ಆಸ್ಪತ್ರೆಗೆ ಹೋದವರು? ಊ....ಊ....ಊ....ಔಷಧಿ ತರಲಿಕ್ಕೆ ಶೀಸೆನಾದರೂ ಒಯ್ದಾರೋ ಇಲ್ವೊ. ನೋಡೋ ಆ ಗೂಡಿನಲ್ಲಿ ಬಾಟ್ಲಿ ಇದೆ ಏನೋ.

ರಾ :— ಇದೆ ಅಮ್ಮ. ಗೂಡಿನಲ್ಲೇ ಇದೆ ಬಾಟ್ಲಿ.

ಶ್ರೀ :— ಸರಿ, ಬಹಳ ಚೆನ್ನಾಗಿದೆ ಹಣೇಬರಹ! ಇನ್ನೂ ಒಂದು ಎರ ಡಾಣೆ ಕೊಟ್ಟು ಬಾಟ್ಲಿ ಕೊಂಡು ತರತಾರೆ ಅಷ್ಟೆ. ಹೀಗೆ ಹಣ ಎಲ್ಲ ಹಾಳು. ಇರಲಿ ನೀನು ಓದಿಕೋ ಅಪ್ಪ ಸದ್ಯ, ಅವರು ಬರೋ ಹೊತ್ತು ಆಯ್ತು.

**ರಾ:**— ಎಮ್. ಎ. ಟಿ ಕ್ಯಾಟ್-ಇಲಿ. ಆರ್. ಎ. ಟಿ-ಮ್ಯಾಟ್-ಚೆಕ್ಸ್. ಎಮ್. ಎ. ಟಿ. ಕ್ಯಾಟ್-ಇಲಿ. ಅರ್. ಎ. ಟಿ-ಮ್ಯಾಟ್-ಬೆಕ್ಸ್.

**ಗೋ:**— (ಪ್ರವೇಶಿಸುತ್ತಾ) ಏನ್ಮಗನೇ ಏನ್ಮಾಡ್ತಾ ಇದ್ದೀ? ಓಹೋ, ಪುತ್ರನ ವಿದ್ಯಾಭ್ಯಾಸ ಜೋರಿ ನಡೆದಿದೆಯೋ ಈ ಸಂಭ್ರಮಕ್ಕೆ? ಏನೋ ರಾಜ ಓತ್ತಾ ಇರೋದು?

**ರಾ:**— ನೀನು ನಿನ್ನೆ ಹೇಳಿಕೊಟ್ಟ ಪಾಠ ಅಪ್ಪ.

**ಗೋ:**— ಹೂ ಓದು.

**ರಾ:**— ಎಮ್ ಎ ಟಿ. ಕ್ಯಾಟ್-ಇಲಿ.

**ಗೋ:**— ಸಾಕಪ್ಪ ಸಾಕೋ ನಿನ್ನ ಇಂಗ್ಲೀಷು! ಯಾವ ಅಸಹ್ಯತನೋ ನಿನಗೆ ಈ ಇಂಗ್ಲೀಷು ಹೇಳಿಕೊಟ್ಟಿದ್ದು!

**ರಾ:**— ನೀನೇ ಅಲ್ಲವೇನಪ್ಪ ನಿನ್ನೆ ಹೇಳಿಕೊಟ್ಟಿದ್ದು.

**ಗೋ:**— ಬಾಯಿಮುಚ್ಕೋ. ನಿನ್ನ ಈ ಓದಿನ ಸಂಭ್ರಮಕ್ಕೆ ಒಂದು ರೂಪಾಯಿ ನಾಲ್ಕಾಣೆ ಸ್ಕೂಲುಫೀ ಬೇರೆ. ಈ ಕಷ್ಟಕಾಲದಲ್ಲಿ ಅದೇ ಹಣ ಇದ್ರೆ ಸೌದೆ, ಸೀಮೆ ಎಣ್ಣೆ, ಸಕ್ಕರೆಗಾದರೂ ಆಗುತ್ತೆ. ಆ ಪುಸ್ತಕಕ್ಕೆ ಬೇರೆ ಆರಾಣೆ ಹಾಳು. ನಾಳೆನಿಂದ ನೀನು 'ಶಾಲೆ' ಅನ್ನು, ಕತ್ತು ಹಿಸುಕ್ಕಿ ಬಿಡ್ತಿನೆ ಅಷ್ಟೆ.

**ಶ್ರೀ:**— ಯಾಕೆ ನೀವು ಅವನನ್ನು ಸುಮ್ನೆ ಬೈತ ಇರೋದು? ಏನು ಮಾಡಿದ್ದ ಅವನೀಗ? ಬಂಗಾರದಷ್ಟಾಗೆ ಓತ್ತಾ ಕುಳಿತಿದ್ದ ಕೂಸಿನ್ನ ಯಾಕೆ ಬೈಯೋದು ನೀವು?

**ಗೋ:**— ಯಾಕೂ ಇಲ್ಲ ಮಹರಾಯತಿ, ನೀನು ಇನ್ನು ಅದನ್ನೆ ಪೇಚಾಡ್ತಾ ರಾತ್ರಿಯೆಲ್ಲ ಕುಳಿತು ಅರೆಜೀವ ಮಾಡಿಕೊಳ್ಳೋದು ಬೇಡ ಡಾಕ್ಟರು ಹೇಳಿದರು—

**ಶ್ರೀ:**— ಏನು ಹೇಳಿದರು ಡಾಕ್ಟರು?

**ಗೋ:**— ಬೇರೆ ಇನ್ನೇನು ತಾನೆ ಹೇಳ್ತಾರೆ. ಈ ರೋಗವೇ ಬಹಳ ಕ್ರೂರವಾದದ್ದು—

ಶ್ರೀ :— ಅದೆಲ್ಲ ಪುರಾಣ ಬೇಡ ನನಗೆ. ಇದೇನು ವಾಸಿಯಾಗುತ್ತಂತೋ ಇಲ್ವಂತೋ ? ಈ ರೀತಿ ಹಾಸಿಗಿ ಹಿಡಿದೇ ಆರು ತಿಂಗಳಾಯ್ತಲ್ಲ. ಸಂಜೆ ಆದಂತೆಲ್ಲ ಸಣ್ಣಾಗಿ ಜ್ವರ, ಈ ನುಸಿಗೆಮ್ಮು—

ಗೋ :— ಹೌದೇ, ಅವರು ಆಗಲೆ ಹೇಳಲಿಲ್ವೆ, ಈ ರೋಗವೇ ಅಂಥಾದ್ದು ಅಂತ ? ಕ್ಷಯರೋಗದ ಲಕ್ಷಣಗಳು ಇವು. ಇರಲಿ ಬಿಡು, ಅದೇನೂ ಬಾಧಕವಿಲ್ಲ. ಇನ್ನೊಂದು ವಿಷಯ ಹೇಳಿದರು.

ಶ್ರೀ :— ಏನೂ, ಬಿಲ್ಲು ಕೊಡೋ ವರೆಗೂ ಔಷಧಿ ಕೊಡೋಲ್ಲ ಅಂತಾ ತಾನೆ ?

ಗೋ :— ಛೆ, ಛೆ, ಅಲ್ವೆ, ಹಾಗೆ ಎಂದಿಗೂ ಅನ್ನೋಲ್ಲ ಅವರು.

ಶ್ರೀ :— ಅನ್ನದೆ ಏನು ? ಔಷಧಿ ಕರ್ಚು ಸಹ ಕೊಡದಿದ್ರೆ ಅವರಾದರೂ ಏನು ಮಾಡೋದು? ಒಳ್ಳೆಯವರಾದ ಮಾತ್ರ ಅವರಿಗೇನು ಔಷಧಿ ಬಿಟ್ಟಿ ಬರುತ್ತಾ ?

ಗೋ :— ಅವರ ಬಿಲ್ಲಿನ ವಿಷಯ ನೀನು ಯೋಚನೆ ಮಾಡೋದೆ ಬೇಡ ನಾನು ಆಗಲೆ ಸರಿ ಮಾಡಿ ಬಿಟ್ಟೇನೆ.

ಶ್ರೀ :— ಏನು ಮಾಡಿರಿ ಸ—ಬೆಸ್ಸೆ.

ಗೋ :— ಇಲ್ವೆ, ನಿನಗೇಕೆ ಇವೆಲ್ಲ ಯೋಚನೆ? ನನ್ನ ವಾಚಿನ ಚೈನ್ ಇದೆಯಲ್ಲಾ—

ಶ್ರೀ :— ಹೂ, ಅದನ್ನ ಮಾರೋದ ?

ಗೋ :— ಏನೇ, ಪೂಜೆ ಮಾಡೋದಕ್ಕೆ ಚಿನ್ನ ಇರೋದೇ ಮನೇಲಿ, ಇಂಥಾ ಸಮಯಕ್ಕಾಗದಿದ್ರೆ ?

ಶ್ರೀ :— ಸಾಕು ಸುಮ್ನೆ ಇರಿ ಅಂದ್ರೆ. ಲಕ್ಷಣವಾಗಿ ಶುಕ್ರವಾರ ದೀಪ ಹಚ್ಚಿದ ಕೂಡಲೆ ಬಂದು ಚಿನ್ನ ಮಾರ್ತಾರಂತೆ, ದೊಡ್ಡದಾಗಿ ಹೇಳಕ್ಕೆ ಬಂದಾರೆ ಇಲ್ಲೆ ಏನೋ.

ಗೋ :— ಹೂ, ಬಿಡು ಬಿಡು, ಬೇಡ ಬಿಡು ಕಣೇ, ಬೇಡ. ನೀನು ಇಷ್ಟಕ್ಕೆ ಕಿರಿಚಿಗೊಳ್ತಾ ಕುಳಿತು ರೋಗ ಹೆಚ್ಚು ಮಾಡಿಕೊಳ್ಳೋದು ಬೇಡ. ಡಾಕ್ಟರು ಹೇಳಿದ್ದೇನಂದ್ರೆ—

ಶ್ರೀ :— ಹೂ ಹೇಳಿ, ಏನು ಹೇಳಿದರು ಡಾಕ್ಟರು?

ಗೋ :— ನಿನಗೆ ಹಾರ್ಟ್ ಟ್ರಬಲ್ ಅಂತೆ.

ಶ್ರೀ :— ಏನು ಹೊಸ ಹೊಸವೆಲ್ಲ ಹೇಳ್ತಾ ಇದ್ದೀರಾ. ಏನದು ಆರ್ಟ್ ಅಂದ್ರೆ? ನನಗೆಂದೂ ಇರಲಿಲ್ಲವಲ್ಲ ಅದು?

ಗೋ :— ಅಲ್ಲವೆ, ಹಾರ್ಟ್ ಇಲ್ಲದೆ ಯಾರಾದರೂ ಇರ್ತಾರಯೆ? ಹಾರ್ಟ್ ಅಂದರೆ ಹೃದಯ. ಅದು ಬಹಳ ನಿತ್ರಾಣವಾಗಿದೆಯಂತೆ ನಿನಗೆ. ಹುಷಾರಿಯಿಂದ ಇರಬೇಕಂತೆ. ಅಳಕೂಡದಂತೆ, ನಗಕೂಡದಂತೆ, ಬಹಳ ದುಃಖ ಅಥವಾ ಸಂತೋಷದ ಸುದ್ದಿ ಕೇಳಿದರೆ ಸಹ ಪ್ರಮಾದವಂತೆ.

ಶ್ರೀ :— ಚೆನ್ನಾಗಿದೆ ಗೃಹಚಾರ, ಇದೇ ಒಂದು ಸಂತೋಷದ ಸುದ್ದಿ ಹೇಳಿದಿರಲ್ಲ ಸಧ್ಯ.

೨

[ ರೀಡಿಂಗ್ ರೂಮಿನ ಅಂಗಣದಲ್ಲಿ ಈಸ್ಪೀಟ ಆಟ ನಡೆದಿವೆ, ]

ಒಬ್ಬ :— ಆಠೀನು ನೈಲಾ.

ಇನ್ನೊಬ್ಬ :— ಥೈಲಾ.

ಗೋಪು :— ಇಳಿಸಯ್ಯ, ಕೈಯಲ್ಲಿ ಹಿಡಿದು ಹೇಳಿ ಬಿಟ್ಟರಾಯಿತೇ.

ಇನ್ನೊಬ್ಬ :— ನೋಡಯ್ಯ? ಇಷ್ಟು ಕೂಡ ನಂಬಿಕೆ ಇಲ್ವೆ. ಈಗಾದರೂ ಖಾತ್ರಿಯಾಯಿತೇ?

ಗೋಪು :— ಹೋಯಿತಯ್ಯ ಎಕ್ಕ ಅನ್ಯಾಯವಾಗಿ. ಹೂ, ಬರಲಿ ಕಡೇ ಕೈ ಜಾಕಿ.

ಮತ್ತೊಬ್ಬ :— ಎಲ್ಲಿದೆ ಜಾಕಿ? ಏಳರ ಪುಡಿ.

PAUSE

ಒ:— ಎಲೆ ಕಲಸಯ್ಯ ಗೋಪೂರ ಏನು ಸಮಾಚಾರ ಏಳ್ತಾ ಇದೀಯಾ ಆಗಲೆ.

ಗೋ :— ಹೋಗ್ತೀನಯ್ಯ ಮನೆಗೆ, ಡ್ಯೂಟಿ ಇದೆಯಲ್ಲ—ಖಾಯಿಲೆ ಹೆಂಡತಿಗೆ ಚಾಕರಿ.

ಇ :— ಹೋಗು ಹೋಗು ಪಾಪ. ಇವಾರಿಗಯ್ಯ ಟೆಂಗ್ರಾಂ, ಟೆಲಿಗ್ರಾಫ್ ಸಾಬಿ ಬಂದಾನೆ. ಏ ಸಾಬಿ ಯಾರನ್ನಯ್ಯ ಹುಡುಕುತ್ತಿ ಯಾರಿಗೆ ಟೆಲಿಗ್ರಾಂ?

**ಸಾ** :— ಗೋಪು ಮಹಾರಾಜ್ ಎಲ್ಲಿದ್ದಾರೆ ಸ್ವಾಮಿ?

**ಮ** :— ಇಲ್ಲೆ ಪ್ರತ್ಯಕ್ಷ ಇದ್ದಾರೆ ಬಾ. ಏನು ಸುದ್ದಿ ತಂದೆಯ್ಯ? ನಾನು ಸಹಿ ಮಾಡ್ತೇನೆ, ನೀನು ಟೆಲಿಗ್ರಾಂ ನೋಡು ಗೋಪು.

**ಗೋ** :— ಫಸ್ಟ್ ಪ್ರೈಜ್ ಓ. ಒಂದು ಲಕ್ಷ ರೂಪಾಯಿ ನನಗೆ, ಒಂದು ಲಕ್ಷ ರೂಪಾಯಿ!

**ಎಲ್ಲರೂ** :— ಏನಯ್ಯ ಗೋಪು ಅನು. ಛೇಷ್, ಕಂಗ್ರ್ಯಾಚುಲೇಷನ್ಸ್. (ಗಲಭೆ, ಎಲ್ಲೆಲ್ಲಿಯೂ ಕಂಗ್ರ್ಯಾಚುಲೇಷನ್ಸ್ ಎಂಬ ಶಬ್ದ)

**ಸಾರಂಗ** :— ಕಂಗ್ರ್ಯಾಚುಲೇಷನ್ಸ್ ಗೋಪೂ

**ಗೋಪೂ** :— ಯಾರು ಡಾಕ್ಟರ್ ಸಾರಂಗಪಾಣಿಯವರೇ.

**ಸಾ** :— ಬಹಳ ಸಂತೋಷಪ್ಪ ಗೋಪೂ, ಬಹಳ ಸಂತೋಷ. ಬಡನದ ಬೃಹಸ್ಪತಿ, ಹೆಂಡತಿಯ ಕಾಯಿಲೆ ಇವರಲ್ಲೆ ಪೂರ್ತಿ ಮೆತ್ತಗಾಗಿ ಹೋಗಿದ್ದಿ. ಸಧ್ಯ ದೇವರು ಕಣ್ಣುಗದ ಅನ್ನು.

**ಗೋ** :— ನಿಜವಾಗಲೂ ಡಾಕ್ಟರೇ! ಇಲ್ಲದಿದ್ರೆ ನನ್ನ ಗತಿ—

**ಸಾ** :— ಹೌದು, ಬೈ-ದಿ-ಬೈ—ನಿನ್ನ ಹೆಂಡತಿ ಹೇಗಿದ್ದಾಳಪ್ಪ? ಟಿ. ಬಿ. ಅಂತ ಹೇಳಿದರಲ್ಲಯ್ಯ ಪಾಪ.

**ಗೋ** :— ಹೇಗೆ ಏನು ಇರೋದು ಡಾಕ್ಟರ್? ಇದ್ದಾಳೆ. ಅಸ್ತಿಪಂಜರ ಎರಡು ಉಳಿದಿದೆ ಅಷ್ಟೆ.

**ಸಾ** :— ಅಯ್ಯಯ್ಯ ಏನಸ್ಮಾಯಯ್ಯ ಪಾಪ. ಅವಳ ತಂದೆ ವೆಂಕಟರಮಣಯ್ಯ ಅವರು ನನಗೆ ತುಂಬ ಬೇಕಾದವರು. ನಮ್ಮ ಮನೆಗೆ ಕ್ಕೆ ಮನೆಯಲ್ಲೆ ಇದ್ದರು. ಅವಳು ಕೂಡ ಮದುವೆ ಆಗೋವರೆಗೂ ನಮ್ಮ ಮನೇಲೇ ಆಡಿದವಳು. ನನ್ನಲ್ಲಿ ತುಂಬಾ ಸಲಿಗೆ ಅವಳಿಗೆ. ಹೇಳು ಅವಳಿಗೆ ಫಿಸಿಯಾಲಜಿಸ್ಟ್ ಸಾರಂಗಪಾಣಿ ಬಹಳ ವಿಚಾರಿಸಿದರೂ ಅಂತೆ.

**ಗೋ** :— ತಪ್ಪದೆ ಹೇಳುತ್ತೇನೆ ಡಾಕ್ಟರ್. ಅವಳಿಗೆ ನೋಡೀ, ಕಾಲದ್ದಕ್ಕೆ ಹಾರ್ಟ್‌ಟ್ರಬಲ್ ಬೇರೆ ಸೇರ್ಕೊಂಡು ಬಿಟ್ಟಿದೆ ಈಗ.

**ಸಾ** :— ಏನು? ಹಾರ್ಟ್‌ಟ್ರಬಲ್ಲೇ? ಹಾಗಾದರಂತೂ ನೀನು ಬಹಳ ಹುಷಾರಾಗಿರಬೇಕಯ್ಯ ಗೋಪೂ. ಸ್ವಲ್ಪ ಕೂಡ ಎಕ್ಸೈಟಮೆಂಟು ಕೂಡದು. ಅಹುದಯ್ಯ ನೀನು ಈಗ ಒಂದು ಲಕ್ಷ ರೂಪಾಯಿ ಬಂದಿದೆ ಅಂತ

ಹೇಳಿ ಅನ್ಯಾಯವಾಗಿ ಅವಳನ್ನು ಕೊಂದುಹಾಕಿ ಬಿಟ್ಟೆಯಾ ? ಈ ಸುದ್ದಿ ಕೇಳಿದ ಸಂತೋಷದಲ್ಲೇ ಅವಳ ಹೃದಯ ಹಾಗೇ ನಿಂತುಹೋದೀತು ಆಮೇಲೆ.

**ಗೋ** :— ಅಹುದು ಡಾಕ್ಟರೇ, ಅದು ಕೂಡ ನಿಜ. ಮತ್ತೆ ಏನು ಮಾಡ್ಬೇಕು ನೀವೇ ಹೇಳಿ, ಸೈಕಾಲಿಜಿಸ್ಟ್ ಇದ್ದೀರಲ್ಲ. ಇದೆಲ್ಲ ಏಕೆ ಪಂಚಾಯತಿ. ನೀವೇ ನಮ್ಮ ಮನೆಗೆ ಬಂದುಬಿಡಿ. ಅವಳನ್ನು ನೋಡಿದ ಹಾಗೂ ಆಗುತ್ತೆ, ಅದು ಹೇಗೆ ಹೇಳ್ಬೇಕೋ ನೀವೇ ಹೇಳಿಬಿಡಿ.

**ಸಾ** :— ಅದೂ ನಿಜವೇ. ಬಾ ಹಾಗಾದರೆ, ಕಾರಿನಲ್ಲಿ ಕುಳಿತುಗೊಂ ಹೋಗೋಣ. ನಿನ್ನ ವೈಫ್ಗೆ ಹೋಮಿಯೋಪತಿ ಟ್ರೈ ಮಾಡಿದೇನಯ್ಯ ಗೋಪು ?

**ಗೋ** :— ಎಲ್ಲ ಪತಿ ಆಯಿತು ಡಾಕ್ಟರೇ, ಅಲೋಪತಿ ಆಯಿತು ಹೋಮಿಯೋಪತಿ ಆಯಿತು. ಇವೆಲ್ಲ ಪತಿ ಬಿಟ್ಟು ಬಿಟ್ಟು ಇನ್ನು ತಿರುಪತಿಗೆ ಹೋಗಿ ವೆಂಕಟಾಚಲಪತಿ ಟ್ರೈ ಮಾಡೋಣ ಅಂತ ಇದ್ದೀನಿ.

( ಮೋಟಾರ್ ಕಾರಿನಲ್ಲಿ ಹೊರಡುವರು )

೩

[ ಗೋಪೂನ ಮನೆ. ಶ್ರೀರಂಗಮ್ಮ ಹಾಸಿಗೆ ಮೇಲೆ ಒರಗಿದ್ದಾಳೆ. ಮನೆಯಲ್ಲಿ ಕತ್ತಲು. ರಾಜು ದೀಪಹಚ್ಚಲು ಕಡ್ಡೀಪೆಟ್ಟಿಗೆ ಹುಡುಕುತ್ತಿದ್ದಾನೆ. ]

**ರಾ** :— ಈ ಗೂಡಿನಲ್ಲಿ ಇಲ್ಲವಲ್ಲಮ್ಮ ಬೆಂಕಿಪೆಟ್ಟಿಗೆ

**ಶ್ರೀ** :— ಆ ಗೂಡಲ್ಲ ಮಗೂ ನಾನು ಹೇಳಿದ್ದು. ಈ ಬದಿ ಇದೆ ನೋಡು ಚಿಕ್ಕ ಗೂಡು.

**ರಾ**:— ಇದರಲ್ಲೂನು ಇಲ್ಲ.

**ಶ್ರೀ** :— ನನ್ನ ಮಂಚದ ಅಡಿಯಲ್ಲೇನಾದರೂ ಇದೆಯೋನೋ ನೋಡೋ.

**ರಾ**:— ಇಲ್ಲವಮ್ಮ. ಇಲ್ಲಿ ಸಹ ಇಲ್ಲ.

**ಶ್ರೀ** :— ಸರಿ, ಅವರ ಜೇಬಿನಲ್ಲೆ ಹೋಗಿರಬೇಕು.

**ರಾ** :— ಹೇಗಮ್ಮ ಮತ್ತೆ ದೀಪ ಮುಟ್ಟಿಸೋದು ?

( ಬಾಗಿಲ ಬಡೆದ ಸಪ್ಪಳ )

**ಶ್ರೀ** :— ಯಾರದು ಬಾಗಿಲಲ್ಲಿ ರಾಜ ಹೋಗಿ ನೋಡಪ್ಪ ಯಾರು ಬಂದಿದಾರೆಯೋ ? ಕತ್ತಲು ಆದರು ಸಹ ಇವರಿಗೆ ಮನೆಗೆ ಬಾರದಷ್ಟು ಏನು ಕೆಲಸ ಇರುತ್ತೋ ದೇವರೇ ಬಲ್ಲ. ರಾತ್ರಿಯಾಗಿದೆ ಮನೇಲಿ ಒಬ್ಬಳೇ ಇದ್ದಾಳೆ ಅಂತ ಏನಾದರೂ—

**ರಾ** :— ಅಮ್ಮಾ, ಅಪ್ಪ ಅವರೊಟ್ಟಿಗೆ ಇನ್ನೊಬ್ಬರು ಬಂದಿದ್ದಾರೆ ಅಮ್ಮ ಅವರು ದಪ್ಪಗೆ ಡಾಕ್ಟರು ಇದ್ದ ಹಾಗೆ ಇದ್ದಾರೆ.

**ಗೋ** :— ಇದೇನೆ, ಕತ್ತಲ ಮನೇಲಿ ಕುಳಿತಿದಿಯಾ?

**ಶ್ರೀ** :— ಮತ್ತೇನು ಮಾಡೋದು, ದೀಪ ಮುಟ್ಟಿಸೋಕೆ ಯಾರಾ ವರೂ ಗತಿಯಿದ್ರೆ ತಾನೆ ಈ ಮನೇಲಿ.

**ಗೋ** :— ಅಲ್ಲೆ ಇದ್ದನಲ್ವೆ ರಾಜು.

**ಶ್ರೀ** :— ಕಡ್ಡಿ ಪೆಟ್ಟಿಗೆ ನೀವು ಜೇಬಿನಲ್ಲಿಟ್ಟುಗೊಂಡು ಹೋದರೆ ಅವನು ಹೇಗೆ ತಾನೆ ದೀಪ ಹಚ್ಚೋದು ?

**ಗೋ** :— ಇರಲಿ ಬಿಡು, ನಾನೇ ಹಚ್ತೇನೆ. ಡಾಕ್ಟರ್ ಒಂದು ನಿಮಿಷ ಕ್ಷಮಿಸಿ ಬಂದೆ, ಈಗ ದೀಪಹಚ್ಚಿ ಬಂದುಬಿಟ್ಟೆ. ( ನಿಶ್ಶಬ್ದ ) ಬನ್ನಿ, ಡಾಕ್ಟರ್ ಒಳಗೆ ಬನ್ನಿ. ಬನ್ನಿ. ಏನೇ ನೋಡಿದಿಯಾ ಯಾರು ಬಂದಿ ದಾರೋ ನೋಡು. ದೊಡ್ಡ ಡಾಕ್ಟರ್—ಸೈಕಾಲಜಿಸ್ಟ್ ಸಾರಂಗಪಾಣಿ.

**ಸಾ** :— ಏನಮ್ಮಾ, ಚೆನ್ನಾಗಿದ್ದೀಯಾ ? ಪರಿಚಯವಿದೆಯೋ ?

**ಶ್ರೀ** :— ಯಾರು! ಸಾರಂಗಪಾಣಿಯವರೇ, ಬನ್ನಿ ಕುಳಿತುಕೊಳ್ಳಿ. ಎಷ್ಟು ವರ್ಷಗಳು ಆಗಿಹೋದವು ನಿಮ್ಮನ್ನು ನೋಡಿ ಎಲ್ಲರೂ ಚೆನ್ನಾಗಿ ದ್ದಾರೆಯೆ ಮನೇಲಿ. ಚಿಕ್ಕ ಮಗಳ ಮದುವೆ ಆಯಿತೇ ?

**ಸಾ** :— ಅವಳ ಒಬ್ಬಳ ಮದುವೆ ಮಾತ್ರ ಬಾಕಿ ಇವೆಯಮ್ಮ. ಅದಕ್ಕಾಗಿಯೇ ಬಂದೆ. ಇಲ್ಲೆ ಒಂದೆರಡು ವರ ನೋಡಿದೆ.

**ಶ್ರೀ** :— ರಾಜೂ ರಾಜೂ.

**ರಾ** :— ಏನಮ್ಮ ?

**ಶ್ರೀ** :— ಇಲ್ಲಿ ಬಾಪ್ಪ. ತಾತಗೆ ನಮಸ್ಕಾರ ಮಾಡು.

**ಸಾ** :— ಆ ಬಹಳ ಸಂತೋಷಮ್ಮ ಚೆನ್ನಾಗಿದ್ದಾನೆ ಸ್ಕೂಲಿಗೆ ಹೋಗ್ತೀಯೋನೋ ಮಗು.

**ರಾ** :— ಆದಿತ್ಯವಾರ ಕೂಡ ಹೋಗಬೇಕೇನೋ ಸ್ಕೂಲಿಗೆ ?

**ಸಾ** :— ಯಾವ ಕ್ಲಾಸಿನಲ್ಲಿ ಓತ್ತಾ ಇದ್ದಾನೆ ಇವನು ಗೋಪೂ?

**ಗೋ** :— ಏಳನೇ ಕ್ಲಾಸು.

**ರಾ** :— ಬಿ. ಸೆಕ್ಷನ್ನು.

**ಸಾ** :— ಓಹೋ ಬಹಳ ಹುಷಾರ್ ಇದ್ದೀಯಯ್ಯಾ ನೀನು. ಇವನ್ನು ಬೇಗ ಬಿ. ಎ. ಪ್ಯಾಸು ಮಾಡಿಸಿ ಇಂಗ್ಲಂಡಿಗೆ ಕಳಿಸಿಬಿಡಿ.

**ಶ್ರೀ** :— ಕಂಡಂತೇ ಇದೆ ಇವನ ಅದೃಷ್ಟ! ಈ ಆರನೇ ಕ್ಲಾಸಿಗೆ ಸ್ಕೂಲು ಫೀ ಕೊಡಲಿಕ್ಕೆ ತಾಪತ್ರ್ಯ.

**ಸಾ** :— ಎಷ್ಟು ಮಹಾ ಹಣ ಬೇಕು ಅದಕ್ಕೆ? ಒಂದು ಹತ್ತು ಸಾವಿರ ರೂಪಾಯಿ ಸಿಕ್ಕರೆ ಸಾಕು.

**ಶ್ರೀ** :— ಸಾಕು ಸರಿ, ಸಿಗೋದೆಲ್ಲಿಂದ ಅದು ಹೇಳಿ.

**ಸಾ** :— ಒಂದು ವೇಳೆ ಸಿಕ್ಕರೆ ಏನು ಮಾಡ್ತೀರಾ?

**ಶ್ರೀ** :— ಅಯ್ಯೋ? ಸಿಕ್ಕರೆ ತಾನೆ ನೋಡೋಣ. ನಂದರಾಜ ಭವಿಷ್ಯತಿ ಅಂತ.

**ಸಾ** :— ಅಲ್ಲಮ್ಮಾ, ಈಗ ಸಿಕ್ಕಿದೆ ಅಂತ ಇಟ್ಕೊಳ್ಳಿ. ಅವೆಲ್ಲವನ್ನು ಅವನ ಓದಿಗೆ ಕರ್ಚು ಮಾಡ್ತೀರಾ?

**ಶ್ರೀ**:— ಓಹೋ ಸಂತೋಷದಿಂದ ಮಾಡ್ತೇವೆ.

**ಸಾ** :— ಇಪ್ಪತ್ತು ಸಾವಿರ ಸಿಕ್ಕರೆ?

**ಶ್ರೀ** :— ಇಪ್ಪತ್ತು ಸಾವಿರ ಸಿಕ್ಕರೆ ಬೇರೆ ಏನು ಬೇಡ್ರಪ್ಪ ನಮಗೆ. ಚಿಲ್ಲರೆ ಪುಟ್ಟ ಸಾಲಗಳನ್ನು ತೀರಿಸಿಕೊಂಡು, ಗಾಂಧೀ ನಗರದಲ್ಲಿ ಒಂದು ಮಹರಾಯನಂಥ ಬಂಗ್ಲೆ ತೆಗೆದುಕೊಂಡು ರಾಮಾ ಕೃಷ್ಣಾ ಅಂತ ಇದ್ದು ಬಿಡ್ತೀವಿ, ಅಷ್ಟೆ.

**ಸಾ** :— ಐವತ್ತು ಸಾವಿರ ಸಿಕ್ಕರೆ ಏನು ಮಾಡ್ತೀರಾ?

**ಶ್ರೀ**: — ನಿಮ್ಮ ಪುಣ್ಯ, ನಿಮ್ಮ ಬಾಯಿಹರಕೆಯಿಂದ ಹಾಗೇ ಆಗಿ ಬಿಡಲಿ.

ಸಾ :— ಹೇಳಿ ಮತ್ತೆ, ಏನ್ಮಾಡ್ತೀರಾ ಐವತ್ತು ಸಾವಿರ ಸಿಕ್ಕರೆ?

ಶ್ರೀ :— ಇನ್ನೇನು ಬೇಕು ನಮ್ಮಗೆ? ನಮ್ಮ ರಾಜೂಗೆ ಸ್ಕೂಲಿಗೆ ಹೋಗಲಿಕ್ಕೆ ಒಂದು ಚಿಕ್ಕ ಮೋಟಾರು ಕಾರು, ಅವರಿಗೆ ಆಫೀಸಿಗೆ ಹೋಗ ಲಿಕ್ಕೆ ಇನ್ನೊಂದು ಕಾರು, ಇನ್ನೂ ದೊಡ್ಡ ಬಂಗ್ಲೆ, ಹೂವಿನ ತೋಟ. ಇದಕ್ಕೂ ಹೆಚ್ಚು ಬೇಕೇನು ನಮಗೆ?

ಸಾ :— ಒಂದು ಲಕ್ಷ ರೂಪಾಯಿ ಸಿಕ್ಕರೆ?

ಶ್ರೀ :— ಲಕ್ಷ ರೂಪಾಯಿ! ಲಕ್ಷ ರೂಪಾಯಿ ಬಂದರೆ ಏನಪ್ಪ ಮಾಡೋದು? ನಿಜವಾಗಿ ನನಗೇನು ತೋಚೋಲ್ಲ, ಅಷ್ಟು ಹಣ ಬಂದರೆ ಏನು ಮಾಡೋದು ಅಂತ.

ಸಾ :— ಹಾಗಾದರೆ ಆ ಹೆಚ್ಚಿಗಿ ೫೦ ಸಾವಿರ ರೂಪಾಯಿ ನನಗೆ ಕೊಟ್ಟುಬಿಡ್ತೀರಾ?

ಶ್ರೀ :— ಅಗತ್ಯ ತಕ್ಕೊಳ್ಳಿ, ದೇವರು ಹೆಚ್ಚಿಗಿ ಕೊಟ್ಟಾಗ ಯಾಕೆ ಕೊಡಕೂಡದು?

ಸಾ :— ಕೊಡ್ತೀರಾ ಹಾಗಾದರೆ, ಕೊಡ್ತೀರಾ?

ಶ್ರೀ :— ಓಹೋ ಆಗಲಿ.

ಸಾ :— ನಿಜವಾಗಿ ಕೊಡ್ತೀರಾ, ನನಗೆ ೫೦ ಸಾವಿರ ರೂಪಾಯಿ ಕೊಡ್ತೀರಾ?

ಶ್ರೀ :— ನಿಜವಾಗಿ ಕೊಡ್ತೀವಿ.

ಸಾ :— ನೀವು ಹೇಳಿದರಾಯಿತೆ? ನಿಮ್ಮ ಯಜಮಾನರನ್ನು ಒಪ್ಪಿಸಿ ಮೊದಲು.

ಶ್ರೀ :— ಅವರು ಮಾತ್ರ ಇಲ್ಲ ಅಂತಾರೆಯೆ?

ಸಾ :— ಹೇಳಿಸಿ ಅವರ ಸರಿ ಹಾಗಾದರೆ. ಏನಯ್ಯ ಗೋಪು, ನಿನಗೆ ಒಂದು ಲಕ್ಷ ರೂಪಾಯಿ ಬಂದರೆ ನನಗೆ ಐವತ್ತು ಸಾವಿರ ರೂಪಾಯಿ ಕೊಡ್ತೀಯಾ?.... ಆ ನೋಡಿದೇನಮ್ಮ, ನಿಮ್ಮ ಯಜಮಾನರು ಆಗಲೆ ಅನುಮಾನ ಮಾಡ್ತಿದಾರೆ.

ಶ್ರೀ :— ಅಯ್ಯೋ ! ಕೊಡ್ತೀನೆ ಅನಕೂಡದೆ, ಅದಕ್ಕೇಕೆ ಇಷ್ಟು ಅನುಮಾನ ಮಾಡಬೇಕೋ ನಾನು ಬೇರೆ ಕಾಣೆ. ಅನ್ನಿ, ಅಗತ್ಯ ಕೊಡ್ತೀನಿ ಅಂತ. ಹೂ, ಅನ್ನಿ, ಅನ್ನಿ ಅಂದರೆ.

ಗೋ :— ಕೊ–ಡ್ತೀ–ನೆ.

ಸಾ :— ನನಗೆ!

ಗೋ :— ಹೂ.

ಸಾ :— ೫೦ ಸಾವಿರ ರೂಪಾಯಿ.

ಗೋ :— ಹೂ.

ಸಾ :— ಕೊಡ್ತೀಯಾ.

ಗೋ :— ಆಗಲಿ.

ಸಾ :— ಅಯ್ಯೋ ! ೫೦ ಸಾವಿರ ರೂಪಾಯಿ, ನನಗೆ? ಐಶಾ (ಮೃತನಾಗುವನು)

ಶ್ರೀ :— ಅಯ್ಯೋ ! ಇದೇನು ನೋಡಿ. ಸಾರಂಗಪಾಣಿಯವರ ಮುಖ ಹೇಗಾಗಿದೆ?

ರಾ :— ತಾತಗೆ ಏನಾಗಿದೆಯಪ್ಪ.

ಗೋ :— ಇನ್ನೇನು ಅಯ್ಯೋ ! ಸತ್ತೇ ಹೋಗಿದ್ದಾನೆ ಮಾರ್ಾಯ. ಒಳ್ಳೆ ಸೈಕಾಲಜಿಸ್ಟ್ ಲಕ್ಷ ರೂಪಾಯಿ ಬಂದ ಸುದ್ದಿ ಹೇಳಿದರೆ ನೀನು ಸಾಯು ತ್ತೀದಿ, ತಾನೇ ಹೇಳ್ತೀನಿ ಅಂತ ಮಹರಾಯ ತಾನೇ ಸತ್ತುಹೋದ.



# ಅಯ್ಯೋ ಇದು!

## ಪಾತ್ರಗಳು

೧ **ಗೋವಿಂದರಾಯ** (ವಕೀಲ)
೨ **ಶಾಂತಾಬಾಯಿ** (ವಕೀಲರ ಹೆಂಡತಿ)
೩ **ಕಿವುಡ ಲಕ್ಷ್ಮಿ** (ಮನೆ ಮಾಡುವವಳು)

[ವಕೀಲ ಗೋವಿಂದರಾಯರ ಮನೆಯ ಮಹಡಿಯ ಮೇಲೆ. ಸಾಯಂಕಾಲ ರಾಯರ ಹೆಂಡತಿ ಶಾಂತಾಬಾಯಿ ರೇಡಿಯೋ ಕೇಳುತ್ತಿದ್ದಾಳೆ. ರಾಯರು ಮೂಗಿನ ಕಾಡಿಗೆ ಕನ್ನಡಕವನ್ನಿಟ್ಟು ಕೇಸಿನ ಫೈಲನ್ನು ಕನ್ನಡಕದ ಮೇಲಿಂದ ನೋಡುತ್ತಿದ್ದಾರೆ. ಕಿವುಡು ಲಕ್ಷ್ಮಿ– ಮನೆ ಮಾಡುವವಳು– ಕೆಲಸ ಮಾಡುತ್ತಿದ್ದಾಳೆ.]

**ಶಾಂತಾ** :— (ಗಂಡನನ್ನು ಕರೆಯುವ ರೂಢಿಯ ದನಿಯಲ್ಲಿ) ಏನ್ರೀ, ಅಲ್ಲ.... ಇವರೇ.... ಏನ್ರಿ, (ರೇಡಿಯೋ ನಿಲ್ಲಿಸಿ) ನಿಮ್ಮನ್ನೆ ಕರೆದದ್ದು ಅಂದೆ.

**ರಾಯ** :— ನನ್ನೇ? ನನ್ನ ಇದು ಮಾಡಿದ್ಯಾ?

**ಶಾ** :— ಹೌದು ನಿಮ್ಮನ್ನೆ, ಆ ಬಾಗಿಲು ಕಿಟಕೀನಲ್ಲ ಕರೆದದ್ದು. ಆ ಹಾಳಾದ ಆಫೀಸು ಕೆಲ್ಸ ಬಿಟ್ಟು ಬನ್ನಿ ಒಂದೆರಡು ನಿಮಿಷ ಅಂದ್ರೆ.

**ರಾ** :— ಯಾವುದನ್ನ ಅಂದಿ? ಆ.... ಈ ಇದನ್ನ ಇದು ಮಾಡಿ ಬಾ ಅಂದ್ಯಾ? ಬಂದೆ, ಬಂದೆ.

**ಶಾ** :— (ಮತ್ತೆ ರೇಡಿಯೋ ಇಟ್ಟು, ತುಸು ಹೊತ್ತಿನ ಮೇಲೆ) ಬನ್ನಿ, ಬೇಗ್ನೆ, ನೀವೇನು....

**ರಾ** :— ಇಗೋ ಬಂದುಬಿಟ್ಟೆ, ಬಂದುಬಿಟ್ಟೆ.

**ಶಾ** :— ನಾಳೆ ಬನ್ನಿ ಇನ್ನೂ. ಆಗಲಿಂದ ಕರೀತಾ ಇದ್ರೆ.

**ರಾ** :— ಸರಿ, ಬಂದೀನಿ ನೋಡು. ಏನು ನನ್ನ ಯಾಕೆ ಇದು ಮಾಡಿದೀ?

**ಶಾ** :— ಏನೂ ಇಲ್ಲ, ಹೋಗಿ ಆಫೀಸಿನಲ್ಲಿ ಕೂಡಿ ಅಂದೆ.

ರಾ :— ನಿನಗಾಗಲಿ ಇಷ್ಟಕ್ಕೆ ಇದು ಬಂದುಬಿಡ್ತೇನೋ ಅಲ್ವೆ ?

ಶಾ : — ಏನೂ ಬಂದಿಲ್ಲ ಹೋಗಿ. ನನ್ನ ಸಿಟ್ಟು ಯಾರು ಕೇಳೋವರು?

ರಾ :— ಅಲ್ಲೇ, ನೀನೇನೋ ಆ ಇದನ್ನ ಕೇಳ್ತಾ ಇದ್ದಿ ಅಂತ ಕೊಂಚ ಹೊತ್ತು ನಾನು ಆ ಆಫೀಸಿನ ಇದನ್ನ ಮಾಡ್ತಾ ಇದ್ದೆ.

ಶಾ :— ಆದರೆ ಕೂಗಿದ ಕೂಡಲೆ ಬರಲಿಕ್ಕೆ ಏನಾಗಿತ್ತೊ ಇವರಿಗೆ !

ರಾ :— ನೀನು ಬನ್ನಿ ಅಂತ ಇದು ಮಾಡಿದಾಗ ಕೈಯಲ್ಲಿದ್ದ ಇದನ್ನ ಪೂರ್ತಿ ಇದು ಮಾಡಿ ಬಂದೆ

ಶಾ :— ಸರಿ, ಪೂರ್ತಿಮಾಡಿ ಬಂದಿರೋ ಇಲ್ಲೋ? ಹೋಗಿ ಮಲಗಿಕೊಳ್ಳಿ.

ರಾ :— ಕೊಂಚ ಕೊಂಚಕ್ಕೆ ಇದು ಮಾಡ್ಕೋತೀದಲ್ಲ ಕಣೇ ನೀನು? ನನ್ನ ಇದು ಮಾಡಿದ್ದು ಯಾಕೆ ಇದು ಮಾಡಬಾರದೇ.

ಶಾ :— ಯಾತಕ್ಕೂ ಕರೀಲಿಲ್ಲ ಹೋಗಿ. ನಿಮ್ಮನ್ನ ಕರಿಯೋ ಬದಲು ಆ ಲಕ್ಷ್ಮಿನ್ನಾದರೂ ಕರೆದಿದ್ರೆ ಚನ್ನಾಗಿರೋದು.

ಲ :— (ಗಟ್ಟಿಯಾಗಿ ಒಳಗಿನಿಂದಲೇ) ಬಂದೆ ಅಮ್ಮ ಬಂದೆ. (ಬಂದು) ಏನು ಕರೆದಿರಿ ?

ಶಾ :— ಸರಿ, ಇವಳು ಬೇರೆ. ಮನೆಯ ಯಜಮಾನರೊಂದು ಮಂಕು, ಮನೆ ಮಾಡುವವಳೊಂದು ಕಿವುಡು. ಇವರ ಮಧ್ಯೆ ಹೇಗಿರಬೇಕೋ ನಾನು ಜೇರೆ ಕಾಣೆ. ( ಗಟ್ಟಿಯಾಗಿ) ನಿನ್ನ ಎಲ್ಲಿ ಕರದೆ ?

ಲ :— ಸೊಳ್ಳೆ ಪರದೆ! ಯಾವುದು ಆ ತೂತಿಂದಾ? ನನಗೇನು ಗೊತ್ತಮ್ಮಾ ನಿನ್ನ ಸೊಳ್ಳೆ ಪರದೆ? ನಿನ್ನೆ ಸಾಯಂಕಾಲ ಪಲ್ಲಂಗದ ಮೇಲೆ ಆಸಿಗೆ ಆಕಿ ವರಗೆ ಬಂದವಳು ಮತ್ತೆ ಆ ಕೋಣೆಯಲ್ಲಿ ಕಾಲಿಕ್ಕಿದ್ರೆ ನೀನಿಟ್ಟೆ ಆಣೆ. ನಮ್ಮಗ್ಯಾಕಮ್ಮ ಬಡವರಿಗೆ?

ಶಾ: — ಗೃಹಚಾರ! ಸೊಳ್ಳೆ ಪರದೆ, ಅಲ್ವೆ ನಿನ್ನ ಕರೀಲಿಲ್ಲ ನಾನು ಅಂದೆ.

ಲ :— ಆಹಾ, ಏನೋ ಲಕ್ಷ್ಮಿ ಅಂತ ಅಂದಹಾಗಾತು, ಆದಕ್ಕೇ....

ಶಾ :— ಲಕ್ಷ್ಮಿ ಇಲ್ಲ, ಸರಸ್ವತಿ ಇಲ್ಲ ಹೋಗು ಮಹರಾಯತಿ. ಇವರ ಮುಂದೆ ಹೇಳ್ತಾ ಇದ್ದೆ, ಇವರನ್ನು ಕರೆಯೋ ಬದಲು ನಿನ್ನಾದರೂ ಕರೆದಿದ್ದರೆ ಚನ್ನಾಗಿತ್ತು ಅಂತ.

ಲ :— ಸರಿ ಸರಿ, ಆಯ್ಯಾನೇ ನನ್ನ ಕರೆದದ್ದು.

ರಾ :— ಛೆ, ಛೆ, ನಾನೆಲ್ಲಿ ಲಕ್ಷ್ಮೀನ ಇದು ಮಾಡಿದ್ನೆ? ನಾನಲ್ಲ, ನಾನಲ್ಲ.

ಲ :— ಅಯ್ಯ! ಇಂಗ್ಯಾಕ ಪಿಸ ಪಿಸ ಮಾಡ್ತಾರಿವರೂ, ಕರದೀಸಿ ಅಂತಾವ, ಕರದಿಲ್ಲ ಅಂತಾವ, ಎಂಗಾದರೂ ಮಾಡ್ಕೊಳ್ಳಿ, ನಾನಂತೂ ಕೆಲಸ ಎಲ್ಲ ಮಾಡಿ ಆಸಿಗಿ ಆಸಿ ಮನೆಗೆ ಓಗ್ತೀನಿ. ಕೂಸಿನ್ನ ಬಿಟ್ಟು ಬಂದು ಏಟ ಒತ್ತಾತು. (ಹೋಗುವಳು)

ಶಾ :— ಬಹಳ ಚೆನ್ನಾಗಿದೆ ಹಣೇಬರಹ, ಏನೋ ಮನೇಲೀ ಕುಕ್ಕುರುಸಿದ್ದೀರಲ್ಲ ಅಂತ ನಿಮ್ಮನ್ನ ಕರದದ್ದೆ.

ರಾ :— ಹೌದು, ಈಗಾದರೂ ಇದು ಮಾಡಬಾರದೇ, ನೀನು ಯಾಕೆ ನನ್ನ ಇದು ಮಾಡಿದ್ದು?

ಶಾ :— ಯಾತಕ್ಕೂ ಕರೀಲಿಲ್ಲ ಮುಕುದಾಯರೇ, ಆ ರೇಡಿಯೋ ಕೇಳ್ತಾ ಇದ್ದಾಗ ಜ್ಞಾಪಕವಾಯಿತು ಮೊನ್ನೆ ಹೇಳಿದೆನಲ್ಲ, ಅದಾವ್ಳೋ ಕುಮಾರಿ.... ರೇಡಿಯೋದಲ್ಲಿ ಹಾಡಿದಳು, ಅವಳನ್ನ ನೋಡಿದೆ ಅಂತ........ ಏನು ಸುಮ್ಮನೆ ಆಗಿ ಬಿಟ್ಟಾರಲ್ಲಾ?

ರಾ :— ಹೂ ಹೂ ಹೌದು, ಆ ದಿನ ನೀನು ಏನೋ ಇದು ಮಾಡ್ತಾ ಇದ್ದಿ.

ಶಾ :— ಹೂ, ಹೇಳ್ತಾ ಇದ್ನೆಲ್ಲ. ಅವಳ ಕಿವಿಯಲ್ಲಿನ ವಜ್ರದ ಬೆಂಡೋಲಿ ಬಹಳ ಸೊಗಸಾಗಿದ್ದುವು ಅಂತ ಹೇಳ್ಳಿಲ್ವೇ ನಿಮಗೆ........ ಹೇಳ್ಳಿಲ್ವೇನ್ರೀ?

ರಾ :— ಹೌದು ಹೌದು, ಅವತ್ತು ನನಗೆ ಇದು ಮಾಡಿದ್ದೀ, ಏನು ಈಗ?

ಶಾ:— ಏನೂ ಇಲ್ಲ, ಇನ್ನೂ ಎಂದು ನೀವು ನನಗೆ ವಜ್ರದ ಬೆಂಡೋಲಿ ಕೊಡಿಸೋದೂ ಅಂದೆ ಅಷ್ಟೆ. ನಾನು ನಿಮ್ಮನ್ನ ಕೇಳೀ ಈಗಾಗಲೆ ತಿಂಗಳಾಯಿತು

ರಾ :— ತಿಂಗಳೂ, ತಿಂಗಳೆಲ್ಲಿ! ಹೋದ ವಾರ ಅಲ್ವೆ ನೀನು ನನಗೆ ಇದರ ವಿಷಯ ಇದು ಮಾಡಿದ್ದು. ಶನಿವಾರ ಶನಿವಾರಕ್ಕೆ ಎಂಟು, ಮೇಲೆ ಇದು ನಾಲ್ಕು ಹನ್ನೆರಡು ಇದು ಆಯಿತು ಅಷ್ಟೆ.

ಶಾ:— ಹೂ ಆಗಲಿ, ಹನ್ನೆರಡು ದಿವಸೇ ಆಗಲಿ, ಇನ್ನ ಎಷ್ಟು ಹದಿನೆಂಟು ದಿವಸ ಅಲ್ವೆ ತಿಂಗಳಿಗೆ ಕಡಿಮೆ ಇರೋದು? ಮತ್ತೆ ಎಂದ ನೀವು ಕೊಡ್ಸೋದು ಬೇಡ್ವೋಲೀನ

ರಾ:— ನಿನಗೆ ಇದು ಇದು ಮಾಡ್ಸೋದು ಏನು ಮಹಾ ದೊಡ್ಡ ಇದು ಬಿಡೂ, ಆದರೆ ಒಂದು ಇನು, ಈ ಇದರಲ್ಲೆ ಆಗಬೇಕು ಅಂತ ನೀನು ಇದು ಮಾಡಿದರೆ ಹೇಗೆ ಇದು ಆಗುತ್ತೆ? ನೀನೇ ಇದು ಮಾಡು.

ಶಾ:— ಈ ತಿಂಗಳಲ್ಲಿ ಕೊಡಿಸೇ ತೀರಬೇಕು. ನೀವು ಸಾಧ್ಯ ಆಗೋದಿಲ್ಲ ಅಂದ್ರೆ ನಾನು ಮಾತ್ರ ನಿಜವಾಗಿ ಹಟ ಹಿಡಿತೀನೆ. ಯಾಕೆ ಆಗೊಲ್ಲ ಈ ತಿಂಗಳಲ್ಲಿ? ಎಷ್ಟು ಬಂತು ಈ ಸಲ?

ರಾ:— ಎಷ್ಟು ಇದು ಆಗಿದೆ ಮಹಾ, ಬರೀ ಮೂರುನೂರು ರೂಪಾಯಿ ಇದು ಆದದ್ದು.

ಶಾ:— ಮುನ್ನೂರು ರೂಪಾಯಿಯಲ್ಲಿ, ಎರಡುನೂರು ನನ್ನ ಬೇಡೋಲಿಗೆ ತೆಗೆದಿರಿ. ಬರೋ ತಿಂಗಳಲ್ಲಾದರೂ ತೆಗೆಬಹುದು.

ರಾ:— ಉಳಿದ ನೂರರಲ್ಲಿ ಮನೆ ಇದಕ್ಕೆಲ್ಲ ಹೇಗೆ ಇದಾಗುತ್ತದೆ?

ಶಾ:— ನೂರು ರೂಪಾಯಿ ಮನೆ ಕರ್ಚಿಗೆ ಸಾಕಾಗಲ್ವೇನು? ಯಾರಾದರೂ ನಕ್ಕಾರು, ನಾವು ಇರೋದು ಗಂಡ ಹೆಂಡತಿ ಇಬ್ಬರು.

ರಾ:— ಹೆಂಡತಿ ಇಬ್ಬರೂ!

ಶಾ:— ಹಣೇಬರಹ, ಗಂಡ ಹೆಂಡತಿ ಇಬ್ಬರೂ ಅಂದೆ.

ರಾ:— ಓಹೋ, ಹಾಗೆ ಇದು ಮಾಡಿದ್ಯಾ, ಸರಿ. ಅಲ್ವೇ ನೂರ ರೂಪಾಯಿ ಹೇಗೆ ಇದಾಗುತ್ತೇ? ಬರೀ ಔಷಧಕ್ಕೆ ಹದಿನೈದು ರೂಪಾಯಿ ಇದಾಗುತ್ತೆ.

ಶಾ:— ಬಹಳ ಚೆನ್ನಾಗಿದೆ, ಒಂದು ಬಡ ಸಂಸಾರಕ್ಕೆ ಆಗೋ ಅನ್ನದ ಕರ್ಚು ನಾವು ಉಂಡ ಅನ್ನ ಜೀರ್ಣ ಮಾಡಿಕೊಳ್ಳಲಿಕ್ಕೇ ಆಗುತ್ತೆ. ನಮ್ಮಗೆ ನೂರು ರೂಪಾಯಿ ಸಾಲದು ಅಂತೀರಲ್ಲ? ನಾವು ಕೊಡೋ ಹನ್ನೆರಡು ರೂಪಾಯಿನಲ್ಲಿ, ಲಕ್ಷ್ಮೀಗೆ ಹೇಗೆ ಆಗುತ್ತೆ? ಅವರ ಮನೇಲಿ ಎಷ್ಟು ಜನ ಇದ್ದಾರೆ ಅಂತ ತಿಳಿದೀರಾ ನೀವು?

ರಾ:— ಎಷ್ಟು ಇದು ಇದ್ದಾರೆ?

**ಶಾ** :— ಎಷ್ಟು ಇದ್ದಾರೆ! ಲಕ್ಷ್ಮೀ, ಲಕ್ಷ್ಮೀ........ಏ ಲಕ್ಷ್ಮೀ.

**ರಾ** :— ಇರಲಿ ಬಿಡೇ, ಅವಳ್ನೇಕೆ ಇದು ಮಾಡ್ತೀ ?

**ಶಾ** :— ಆಗಲೆ ಮನಿಗೇ ಹೋದಲೋ ಏನು ಇವಳು? ಇನ್ನೂ ಕೆಲಸ ಸಹ ಪೂರ್ತಿ ಮಾಡಿಲ್ಲ. ಲಕ್ಷ್ಮೀ, ಲಕ್ಷ್ಮೀ....( ಒಳಗೆ ಹೋಗಿ ನೋಡಿ ) ಇಲ್ಲಿ ದೆವ್ವನ ಹಾಗೆ ಕೂತಿದಾಳಲ್ಲ ಉಶ್ (ಬೆರಳಿನಿಂದ ಚಿಟಿಗಿ ಹೊಡೆದು) ಲಕ್ಷ್ಮೀ.

**ಲ** :— ಏನಮ್ಮಾ?

**ಶಾ** :— ಇಲ್ಲಿ ಬಾ ಇಲ್ಲಿ........ನಿಮ್ಮ ಮನೇಲಿ ಜನ ಎಷ್ಟು?

**ಲ** :— ( ನಗುತ್ತ ) ನನ್ನ ವಯಸ್ಸು ತೊಗೊಂಡೇನ್ಮಾಡ್ತೀ ಬಿಡಮ್ಮ ನೀನು. ದೊಡ್ಡ ವಿದ್ದ ಆತು ನೋಡಮ್ಮ, ಆಗೇ ನಾನು ನನ್ನ ಗಂಡನ ಮನಿಗೆ ಬಂದೆ.

**ಶಾ** :— ( ನಗುತ್ತ ) ನೀನು ಗಂಡನ ಮನೆಗೆ ಬಂದಿ ಅಂತಾನೇ ಯುದ್ಧ ಆಗಿರಬೇಕು. ಅದಿರಲಿ, ನಿನ್ನ ವಯಸ್ಸಲ್ಲೀ ಕೇಳಿದ್ದು? ನಿನ್ನ ಮನೆ, ನಿನ್ನ ಮನೇಲಿ ಎಷ್ಟು ಜನ ಇರೋದು ಅಂತ ಕೇಳಿದೆ.

**ಲ** :— ಓಹೋ ನನ್ನ ಮನೇನೆ, ಏನು ಮನೆ ಅಮ್ಮ ಬಡವರದು ಮುರಕ ಜೋಪಡಿ, ಮಳೆ ಬಂದರೆ ಮನೆಯಲ್ಲ ನೀರು. ನನ್ನ ಗಂಡ, ಐದು ಮಕ್ಕಳು ಚಳಿಯಲ್ಲಿ ನಡುಗುತಾ ಸಿಂತಿರತಾವ.

**ಶಾ** :— ಸರಿ, ಐದು ಮಕ್ಕಳು, ಒಬ್ಬ ಗಂಡ, ಇವಳು, ಅಂತೂ ಏಳ! ಜನ ಆಯಿತಲ್ಲ.

**ಲ** :— ಅಮ್ಮಾ. ಯಾವುದಾದರೂ ಒಂದು ಹರಕ ಕಂಬ್ಳಿಯಾದರೂ ಇದ್ರೆ ಕೊಡಬಾರದೇ, ಚಳಿಯಲ್ಲಿ ಮಕ್ಕಳು ನಿದ್ದೆ ಇಲ್ಲದೆ ಕಟ ಕಟ ನಡುಗ್ತಾವೆ.

**ರಾ** :— ನಾನು ನಿನಗೆ ಆಗಲೆ ಇದು ಮಾಡಲಿಲ್ಲೇ, ಈ ಪುಣ್ಯಾತ್ಮ ಗಿತ್ತಿನ್ನ ಇದು ಮಾಡಬೇಡ ಅಂತ. ಏನಾದರೂ ಒಂದು ಇದಕ್ಕೆ ಇದು ಮಾಡ್ತಾಳವಳು. ನನಗಾಗಲೆ ಇದು ಇವಳ ಇದು....

**ಲ**:— ನೋಡಮ್ಮ ಅಯ್ಯ ಕೂಡ ಕೊಡು ಅಂತಾರಲ್ಲ ? ಏನಾದರೂ ಒಂದು ಹುಡುಕಿ ಕೊಡವ್ವ, ಪುಣ್ಯ ಬರುತ್ತೆ.

ಶಾ:— ಇರಲಿ ಹೇಗೆ ನೋಡೋಣ, ನನಗೆ ಮೊದಲೇ ತಲೆ ಬೇರೆ ನೋಯುತ್ತೆ.

ರಾ:— ಯಾಕೆ, ಇದು ಯಾಕೆ ಇದಾಯಿತು ನಿನಗೆ ಆ ರಾಮುಲು ಇದರಲ್ಲಿ ಹೊಸ ಇದು ಬಂದಿದೆಯಂತಲ್ಲ, ಇದು ಮಾಡ್ಲಿಕ್ಕೆ ಹೋಗುತ್ತೀಯೇನು?

ಶಾ:— ಹೊಸದಾಗಿ ಯಾವುದು ಬಂದಿದೆ? ಅದೇ ಆ ಸತಿ ಅನಸೂಯ ತಾನೆ? ನೀವೂ ಬಂದರೆ—

ರಾ:— ನಾನು ಹೇಗೆ ಇದು ಮಾಡಲೀ? ನನಗೆ ಆಫೀಸಿನ ಇದು ಬೇರೆ ಬಹಳ ಇದೆ. ಅಲ್ಲದೆ ರಾಮರಾಯರ ಮನೆಗೆ ರಾತ್ರಿ ಇದಕ್ಕೆ ಬೇರೆ ಬರ್ತೀನಿ ಅಂತ ಇದು.

ಶಾ:— ಹಾಗಾದರೆ ನೀವು ಮನೇಲಿ ಊಟ ಮಾಡೋಲ್ಲ ಅನ್ನಿ.

ರಾ:— ಉಹು.

ಶಾ:— ಸರಿ, ನಾನೊಬ್ಬಳೇ ಮನೇಲಿ ಕುಳಿತಿರೋದಾದರೂ ಏಕೆ? ನಾನೂ ಹಾಗೆ ನಮ್ಮ ಅಕ್ಕನ ಮನೆಗೆ ಹೋಗಿ ಅಲ್ಲೇ ಊಟ ಮಾಡಿ, ಸತಿ ಅನಸೂಯ ನೋಡೇ ಮನೆಗೆ ಬರ್ತೀನೆ. ನೀವೂ ಕೂಡ........

ರಾ:— ಇಲ್ಲ, ನನಗೆ ಆಫೀಸಿನ ಇದು ... ...

ಶಾ:— ಹೂ ಬಿಡಿ, ಮತ್ತೆ ಪುರಾಣ ಪ್ರಾರಂಭ ಮಾಡಬೇಡಿ. ನಾನಂತೂ ಹೊರಟೆ. ಲಕ್ಷ್ಮೀ, ಲಕ್ಷ್ಮೀ .......ಏ ಲಕ್ಷ್ಮೀ........ಈ ಕಿವುಡು ಬೇರೆ........ಇಲ್ಲಿ ನೋಡು, ಅವರು ಉಂಡು ಬಂದ ಮೇಲೆ ನೀನು ಮನೆಗೆ ಹೋಗು, ತಿಳಿಯಿತೇ? ಮನೆ ಮುಂದೆ ಜೋಪಾನ. ನಾನು ಹೋಗ್ತೀನಿ

( ನಿರಾಮ )

ರಾ:— ಅಬ್ಬ, ಸಧ್ಯಕ್ಕಂತೂ ನನ್ನ ಇದು ಇದಾದಹಾಗಾಯಿತು. ಈ ವಜ್ರದ ಇದರ ಇದು ಇದಾದಕೂಡಲೆ ನನ್ನ ಮೈಮೇಲೆ ಇದೇ ಬರುತ್ತೆ. ಇನ್ನು ನಾನೂ ಇದು ಮಾಡ್ತೀನೆ ಶಾಮರಾಯರ ಇದಕ್ಕೆ. ಲಕ್ಷ್ಮೀ, ಲಕ್ಷ್ಮೀ....ಏ ಲಕ್ಷ್ಮೀ....

ಲ:— ಕರೆದೇನು ಸ್ವಾಮೀ.

ರಾ:— ಹೌದ., ಇಲ್ಲಿ ಕೇಳು. ನೀನು ಮನೆ ಮುಂದೇ ಇದು ಮಾಡು. ನಾನು ಇದು ಮಾಡೋವರೆಗೂ ನೀನು ಎಲ್ಲೂ ಇದು ಮಾಡ ಬೇಡ. ಇದಾಯಿತೇನು ?

ಲ:— ಏನು ಸಾಮೀ ನೀನನ್ನೋದು?

ರಾ:— ನಾನು ಇದು ಮಾಡಿ ಬರ್ತೀನಿ, ಇದು ಇದೂ, ಇಲ್ಲಿ ನನ್ನ ಕೈ ನೋಡು.

:— ಊಟಾನೇ, ಊಟ ಅನಬಾರದೇನು ಸಾಮಿ. ಅದೇನೋ ದು ಊ ಅಂತಾ ಇದ್ದೀಯಲ್ಲ ಆಗಿನಿಂದ....ಇಷ್ಟು ಬೇಗ ಎಲ್ಲಿ ಸಾಮಿ ನನ್ನೂಟ.

ರಾ:— ನಿನ್ನ ಇದು ಅಲ್ವೇ ನಾನು ಇದು ಮಾಡಿದ್ದೂ. ನಾನು.... ನಾನು ಇದಕ್ಕೆ....

ಲ:— ನೀನು ಅನ್ನ ಹಾಕ್ತೀನಿ ಅಂತೀಯಾ? ಕೊಡು ಸಾಮಿ. ಮಕ್ಕಳಿಗಾದರೂ ಒಯ್ತ್ಯೀನಿ, ಪಾಪ ಹಸಿದಿರುತಾವೆ.

ರಾ:— ಥೂ, ಈ ಕಿವುಡು ಇದನ್ನ ಇದು ಮಾಡಿಕೊಂಡು ಹೇಗೋ ಇದು ಮಾಡೋದು. ಅವಳಿಗೆ ಯಾವುದೂ ಇದು ಮಾಡದೆ ನನ್ನಷ್ಟಕ್ಕೆ ನಾನೇ ಇದು ಮಾಡಿದ್ರೆ ಇದಾಗಿರೋದು. ನಾನಂತೂ ಇದು ಮಾಡ್ತೀನಿ, ನೀನು ಏನಾದರೂ ಇದು ಮಾಡಿಕೋ.

[ ರಾತ್ರಿ ೯ ಗಂಟೆಯ ಸಮಯ. ಶಾಂತಾಬಾಯಿಯ ಮಲಗುವ ಕೋಣೆ. ಸುಂದರವಾಗಿ ಅಲಂಕೃತವಾಗಿದೆ. ದೊಡ್ಡದೊಂದು ಮಂಚದ ಮೇಲೆ ಲಕ್ಷ್ಮಿ ಹಾಸಿಗೆ ಹಾಸುತ್ತಿದ್ದಾಳೆ. ]

ಲ:— ( ತನ್ನಲ್ಲಿಯೇ ) ಶಿವ ಕೊಟ್ಟು ಮರತಾನೋ ಮರತು ಕೊಟ್ಟಾನೋ ಅಂತಾರಲ್ಲ ಅಂಗ— ನಮಗೇನು ಕೊಡಾಕೇ ಮರತಾನೋ ಏನು ಮಾರಾಯ. ಎಂತಾ ಪುಣ್ಯವಂತರು ಅನಬೇಕು ಅಮ್ಮಾವರಿಗೆ....ಆಆಆ ....ಈ ಅರಮನಿ ಅಂತ ಬಂಗ್ಲೆ, ಗಾಳಿ ಬರೋ ಆ ಕಿಂಡಿಗೆ ಏನೋ ಏಳಿದ ರದೂ.... ಎಂಕಟಲಚ್ಮಿ ಏನೋ ಈ ಎಲೆಡಿಕಿ ದೀಪ, ರೇಡೀನೋ ಲೇಡೀನೋ ಅದೇನೋಪದ ಆಡೋ ಪೆಟಿಗಿ, ಜ್ಯಾಯ್ಯಾ ಅಂತ ಮುಕ್ಕು

ಪಿಶಾಚಿಗಳ ಕಾಟಿಲ್ಲ—ಅಂದಂಗೆ ಅನಿಸಿಗೊಂಡು ಬಾಳೇ ಮಾಡೋ ಆಕಳಂತ ಗಂಡ....ಅವೆಲ್ಲ ಆಂಗಿರ್ಲಿ, ಇದು ನೋಡ್ರಿ ಆಸಿಗಿ, ನಂದೂ ಪ್ರಾಣ್ಯಾನೇ ಬಿಡು ಇಂತ ಆಸಿಗಿ ಕೈಲಿ ಮುಟ್ಟ್ಲಕ್ಕೆ........ಐ, ಬೆಂಣಿ ತೆಲಿದಿಂಡು! (ನಗುತ್ತ) ಎಂತಾ ಸಪ್ನ ಬಿದ್ದಿತ್ತು ನಂಗೆ ಒಂದಿನ ಅಂಗೇ! ಇದೇ ಆಸಿಗಿ ಯ್ಯಾಗ ನಾನು ಮಲಗಿದಂಗ ಇತ್ತು....ಮುಂಜಾನೆ ಎದ್ದು ಮನಿ ಆತಗೆ ಏಳಿದರೆ ಏಳ ಮಂಗ, ನಮುಗ್ಯಾಕ ಅಂತಾವು? ಸಳ್ಯಾಗ ಸಾಯ್ತಾವ ಮಕ್ಕಳು ಅದಿವಿ ಅಂಚಡಿ ಇಲ್ಲದ. ಅಂತ ಆಶ್ಯಾ ಮಾಡ್ತು ಕೋಡಿ... ಐ ಇದು ನೋಡು, ಒದುಕೊಂಬೋ ಕಂಬ್ಳಿ. ಇದರ ಎಸರು ಅಗ್ಗೋರಗಗ್ಗೋ ಏನೋ ಏಳ್ತ ಅಮ್ಮ. ಇದಕ್ಕೆ ಎಂಗ ಕೂದಲು ಬೆಳದಿದ್ದಾವ್ರೂ ಅಂತೀನಿ........ಈ ಸೊಳ್ಳೆ ಪರಿದಾನೂ ಒಂದು ಇಸಿತ್ರ ಬಿಡು.... ಎಂಟು ದಿವಸ್ದಿಂದ ಏಸನೀ ಮಾಡ್ತೀನಿ, ಮಾಡೇ ಮಾಡ್ತೀನಿ ಗೊತ್ತಾಗವಲ್ದು ಇದನ್ನ ಎಂಗ ಮಾಡಿದ್ದಾರೂ ಅಂತ. ಬರೀ ತೂಬುಗಳೇ, ತೂಬುಗಳೇ ಎತ್ತಿತ್ತಾಗ ನೋಡಿದ್ರೂ ....ಆ, ಈಗ ಗೊತ್ತಾತು, ತೂಬುಗಳು ತಂದು ಒಂದಕ್ಕೊಂದು ಒಂದಕ್ಕೊಂದು ಒಲುಕೋತ ಓಗವ್ರೆ ಅಷ್ಟೆ....ಇದರೊಳಗೆ ಮನಿಗಿದ್ರೆ ಉಸುರುಗಟ್ಟಾಕಿಲ್ಲ! ಇದರೊಳಗೆ ಕುಂತೇ ನೋಡ್ಲೇನು. ಎಂಗಿದ್ರೂ ಅಪ್ಪ ಅಮ್ಮ ಕೂಡ ಮನಾಗಿಲ್ಲ. ಈಗೆಲ್ಲೆ ಬರ್ತಾರವರು?....ಅಯ್ಯಯ್ಯಪಾ! ಎತ್ತಿ ಒಸೀತದಲ್ಲ ಈ ಮಂಚ! ಇದರ ಮ್ಯಾಗ ಎಂಗ ಮನಗತಿದ್ದಾರೂ ಅಂತೀನಿ....ಆ, ಇಂಗೋ ಇದರ ಕತಿ, ಮನಗಿದರೆ ಒಸಿಯಾಕಿಲ್ಲ, ಕುಂತ್ರೆ ಒಸಿತೈತಿ. ಅಂಗಾರ ಮನಿಗೇ ನೋಡ್ತೀನಿ....ಐ ಗುಳು ಗುಳು ಇಟ್ಟಂಗಾಗ್ತದೆ ಇದರ ಮ್ಯಾಗ ಮಲಗಿದರೆ. ತೆಲಿದಿಂಡು ನೋಡು, ಕೆಸರಿನಾಗ ಕಾಲು ಓದಂಗ ಓಗ್ತದ ತೆಲಿ ಇದರಾಗ....ಇಂಗ್ಯಾಕ ಚಿವ್ ಚಿವ್ ಅಂತದ ಈ ಮಂಚ? ಈ ಕೂದಲ ಬೆಳ್ದರೋ ಕಂಬ್ಳಿ ಒದುಕೊಂಡ್ರೆ ಎಂಟು ದಿವಸಗಟ್ಲೆ ಸುಳಿನ ಆಗ್ಲಿಕಿಲ್ಲ ಅಲ್ಲೇ....ಉರೀ ಕಾಸಿಗುಂಡಂಗೆ ಐತೆ ಇದು. ಇದನ್ನ ತುಂಬ ಒದುಕೊಂಡ್ರೆ ಎಂಗಿರತ್ತೋ....ಐ, ಈ ಊರೀ ಬ್ಯಾರೆ ಇದ್ದಂಗೈತೆ ವಳಗೆ.. .(ಕಂಣು ತನಗೆ ತಾನೇ ಮುಚ್ತಾವೆ....' ಗೊರಕೆ ಹೊಡಿಯುವಳು )

( ವಿರಾಮ )

ರಾ :— (ಕೆಮ್ಮುತ್ತ) ಏನಿದು, ಬಾಗಿಲು ಕೂಡ ಇದು ಮಾಡಿಲ್ಲ; ಎಲ್ಲ ದೀಪಗಳೂ ಹಾಗೇ ಇದಾಗ್ತಾ ಇವೆ. ದೀಪ ಸಹ ಇದು ಮಾಡಿಲ್ಲ. ಆ

ಮಾರಾಯಳು ಇದಕ್ಕೆ ಹೋಗಿದ್ಲು ಅಂತ ಮನಿಯಲ್ಲಿ ಲಕ್ಷ್ಮಿ ಇದೇ ಆಗಿದೆ. ಎಲ್ಲಿ? ಕಾಣವಲ್ಲಲ್ಲ.... ಎಲ್ಲಿ ಇದು ಮಾಡಿಬಿಟ್ಟಳೋ ಆಗಲೆ.... ಲಕ್ಷ್ಮೀ, ಲಕ್ಷ್ಮೀ.... ಏ ಲಕ್ಷ್ಮೀ ಇದೇನಿದು ಈಕೆ ರೂಮಿನಲ್ಲಿ ಸಹ ದೀಪ ಹಾಗೆ ಇದಾಗ್ತಾ ಇದೆ. ಓ ಹೋ ಹೋ, ಹಾಗಾದರೆ ಇದಕ್ಕ ಹೋಗಿಲ್ಲಲ್ಲ ನೀನು? ಏನು ಇಷ್ಟು ಬೇಗ ಮಲಗಿ ಇದು ಮಾಡ್ತಾ ಇದ್ದೀಯಾ?—ಅರೆ, ಇದೇನು ರಗ್ಗು ತುಂಬ ಇದು ಮಾಡಿಕೊಂಡು ಇದು ಮಾಡಿಬಿಟ್ಟೀದಿ. ಬಾಗಿಲು ಕೂಡ ಇದು ಮಾಡಿಲ್ಲ. ದೀಪ ಹಾಗೆ ಇದು ಆಗ್ತಾ ಇವೆ. ಬಹುಶ ಆ ಲಕ್ಷ್ಮಿನೆ ಇದು ಮಾಡಲಿಕ್ಕೆ ಮರೆತು ಹಾಗೇ ಇದು ಮಾಡಿರಬೇಕು. ( ಗೊರಕೆ ಕೇಳುವದು ) ನಿಜವಾಗಿಯೂ ಇದು ಬಂದಿದೆಯೋ ಅಥವಾ ಸುಳ್ಳುಸುಳ್ಳೇ ಇದು ಬಂದವರ ಹಾಗೆ ಇದು ಮಾಡ್ತೀಯಾ?....ಆ....ಏನೇ, ನಿನ್ನ ಆ ವಜ್ರದ ಇದನ್ನ ಅಂಗಡಿಯಲ್ಲಿ ಇದು ಮಾಡಿದೆ...ಛೆ ಛೆ, ನಿಜವಾಗಿಯೂ ಇದು ಬಂದಿದೆ. ಇಲ್ಲದಿದ್ರೆ ಆ ವಜ್ರದ ಇದರ ಸಮಾಚಾರ ಇದು ಮಾಡಿದರೂ ಇನ್ನೂ ಇದು ಮಾಡ್ತಲೇ ಇದ್ದಾಳೆ....ಹೋಗಲಿ, ಸಧ್ಯ ಇದರ ಇದಂತೂ ಈಗ ಇಲ್ಲಲ್ಲ. ನಾನೂ ಸುಖವಾಗಿ ಇದು ಮಾಡ್ತೀನಿ ಯಾಕೇ ಇದಕ್ಕೆ ಹೋಗ್ತೀನಿ ಅಂದವಳು ಇದು ಮಾಡಲೇ ಇಲ್ಲ? ಟಿಕೀಟು ಇದಾಗಲಿಲ್ಲೇನು? ( ಗೊರಕೆ ಕೇಳುವದು ) ಸರಿ ಬಿಡು. ನನ್ನ ರೂಮಿನಲ್ಲಿ ನಾನೂ ಇದು ಮಾಡ್ತೀನಿ. ಇಡೀ ದಿನ ಇದು ಮಾಡಿ ಇದೆಲ್ಲ ಇದು ಆಗಿ ಹೋಗಿದೆ. ( ಆಕಳಿಸಿ ) ಸ್ವಾಮೀ ರಾಮಚಂದ್ರಾ, ಸೀತಾಪತೇ ( ಬಾಯಿಯ ಮುಂದೆ ಬೆರಳಿನಿಂದ ಚಟಿಗಿ ಹೊಡೆದು ) ನೀನೇ ಇದು ಮಾಡಪ್ಪಾ.

( ಗೊರಕೆಗೆ ಪ್ರಾರಂಭ–ಇಬ್ಬರ ಗೊರಕೆಗಳೂ ಕೇಳುತ್ತವೆ. )

( ಬಾಗಿಲುತಟ್ಟಿದ ಸಪ್ಪಳ. ಎರಡೆರಡು ಸಲ, ದಬ್ಬಿದ ಸಪ್ಪಳ )

**ಶಾ** :— ಬಾಗಿಲು, ಬಾಗಿಲು, ಬಾಗಿಲು ತೆಗೆರೀ, ಬಾಗಿಲು, ಬಾಗಿಲು ತೆಗೀರಿ ಅಂದೆ. ಎಚ್ಚರ ಆಯಿತೆ.... ಇದೇನು ನಿದ್ರೆ ಅದೂ....ಕುಂಭಕರ್ಣ ತಲಿ ಮೇಲೆ ಕೈಯಿಟ್ಟು ಹೋದ ಹಾಗಿದೆ....ಬಾಗಿಲು ತೆಗೆರೀ.

**ರಾ** :— (ನಿದ್ರೆಯಲ್ಲಿ) ಯಾರವರೂ....( ಗೊರಕೆ )

**ಶಾ** :— ಬಾಗಿಲು ತೆಗೆರಿ ಅಂದ್ರೆ, ಮಾತಾಡ್ತಾನ ನಿದ್ರೆ ಮಾಡ್ತಿರಲ್ಲ. ತೆಗೀರೀ ಬಾಗಿಲು ತೆಗಿರೀ, ಮತ್ತೆ ಎಷ್ಟಾದರೂ ನಿದ್ರೆ ಮಾಡಿ....ಎದ್ದಿರಾ.... ಏನ್ರೀ....ಏನ್ರೀ....

ರಾ:— (ಸಿಟ್ಟಿನಲ್ಲಿ) ಯಾರದು? ಈ ಅಪರಾತ್ರಿ ಇದರಲ್ಲಿ ಬಂದು ಇದು ಮಾಡೋವರ ಇದನ್ನೆಲ್ಲ ಇದು ಮಾಡೋವರು?

ಶಾ:— ಬಾಗಿಲು ತೆಗೇರೀ ಅಂದ್ರೆ

ರಾ — ಏನಾದರೂ ಅಂಥಾ ಇದು ಇದ್ರೆ, ಹಗಲು ಇದು ಮಾಡಿ ಇದು ಮಾಡ್ಕೋಬೇಕೂ ಸರಿ. ಯಾರೇ ಆಗಲಿ, ಈಗ ಮಾತ್ರ ಇದು ಮಾಡೋ ಲಿಕ್ಕೆ ಆಗೋಲ್ಲ, ಹೋಗ್ರಿ ಏನು ಇದು ಇದ್ರೂ ನಾಳೆ ಬೆಳಿಗ್ಗೆ ಇದು ಮಾಡಿ ನಿಮ್ಮ ಇದು ಮಾಡ್ಕೊಳ್ಳಿ. ಈ ಮಹಾರಾಯಳು ಮೊದಲೇ ತಲೆ ಬೇರೆ ಇದು ಅಂತ ಇದು ಮಾಡ್ತಾ ಇದ್ಳು. ಈಗ ಅವಳು ಎದ್ರೆ ಮತ್ತೆ ಆ ಪಪ್ರದ ಇದರ ಇದು ಇವಾದೀತು ಸಾಯಂಕಾಲ ಆದದ್ದೇ ಸಾಕು.

ಶಾ:— ಇವರಿಗೇನು ಹುಚ್ಚೇ ಹಿಡಿದಿದೆಯೋ ಏನು ಮಣ್ಣು? ಬಾಗಿಲು ತೆಗಿರಿ ಬೇಗ.

ರಾ:— (ಕೋಪದಿಂದ) ಯಾರ್ರೀ ನೀವು? ಆಗ್ಲಿಂದ ಒಂದೇಸಲ ಇದು ಮಾಡ್ತಾ ಇದ್ದೀರಿ?

ಶಾ:— ನಾನ್ರೀ, ಶಾಂತ.

ರಾ:— ಶಾಂತ! ಯಾರು ಶಾಂತಾನೇ!! ನಮ್ಮ ಮನೆ ಆ ಶಾಂತಾನೇ !!!

ಶಾ:— ಹೌದು, ಬಾಗಿಲು ತೆಗಿರಿ ಬೇಗ.

ರಾ:— ನಿಜವಾಗಿಯೂ ಈಕೇ. ಇದು ಕೂಡ ಅವಳದೇ ದನಿ ಇದ್ದ ಹಾಗಿದೆ ಅರೆ, ಆ ರೂಮಿನಲ್ಲಿ ಇದು ಮಾಡ್ತಾ ಇದ್ದವಳು ಅಲ್ಲಿಗೆ ಯಾವಾಗ ಇದು ಮಾಡಿದಿ ನೀನು? ಇದನ್ನ ಇದು ಮಾಡ್ತೀನಿರು, ಎಲ್ಲಾ ಇದು ಆಗಿದೆ.

ಶಾ:— ನಾನೆಲ್ಲ ದೀಪ ಹಚ್ತೇನೆ, ನೀವು ಬಾಗಿಲು ಮಾತ್ರ ತೆಗೆಯಿರಿ.

ರಾ:— ಪೂರ್ತಿ ಇದರಲ್ಲೇ ಇದು ಮಾಡು ಅಂತೀಯಾ? ಆ ಇದು ಮಾಡೀನಿ ನೋಡು. ನೀನು ಇದನ್ನ ಗಟ್ಟಿಯಾಗಿ ಇದು ಮಾಡು

ಶಾ:— (ಬಾಗಿಲನ್ನು ದಬ್ಬಿ) ಕೆಳಗಿನ ಬೋಳ್ಟು ತೆಗೀರಿ, ಇಲ್ಲದಿದ್ದರೆ ಹೇಗೆ ಬಾಗಿಲು ತೆಗೆಯೋದು?

ರಾ:— ಹೌದು, ಇಲ್ಲೊಂದು ಇದು ಬೇರೆ ಇದೆ ಅಲ್ವೆ?.... ಹೂ... ಇದನ್ನು ಇದು ಮಾಡೀನಿ ನೋಡು. ನೀನು ಗಟ್ಟಿಯಾಗಿ ಇದು ಮಾಡು

ಶಾ :— (ಬಾಗಿಲು ತೆಗೆದು) ಅಬ್ಬ, ನಿಮ್ಮನ್ನ ಎಬ್ಬಿಸಲಿಕ್ಕೆ ಊರಲ್ಲಿನ ತಪ್ಪಟೆ, ನಗಾರಿ, ಡೊಳ್ಳು ಎಲ್ಲ ಬೇಕಾಯಿತು. ಅದೇನೋ ಅಂಥಾ ನಿದ್ರೆ.

ರಾ :— ಅಲ್ಲೇ. ನೀನು ನಿನ್ನ ರೂಮಿನಲ್ಲೇ ಇದು ಮಾಡಿದ್ದೆಲ್ಲ....

ಶಾ :— (ಆಶ್ಚರ್ಯ ಕೋಪ) ಇದೇನು, ಯಾರು ಮಲಗಿರೋದು ನನ್ನ ರೂಮಿನಲ್ಲಿ ?

ರಾ :— ಹೌದೇ. ಯಾರದು.... ಅಯ್ಯೊ ಹೆಂಗಸು.

ಶಾ :— ಯಾರದು ಅಂತ ನನ್ನೆ ಕೇಳ್ತೀರಾ ನೀವು. ತಂದು ಮಂಚದ ಮೇಲೆ ಮಲಗಿಸಿದ ನಿಮಗೇ ಗೊತ್ತಿಲ್ವೊ, ಯಾರು ಅಂತ? ಇದು ಬೇರೆ ನಡಿದಿದೆಯೋ ? ಇದಕ್ಕೆನೋ ನನ್ನ ಸಿನೇಮಾಕ್ಕೆ ಅಟ್ಟೆ ಬಿಟ್ಟದ್ದೂ? ಒಂದು ನಿಮಿಷ ತಾಳಿ, ಇಬ್ಬರಿಗೂ ಬುದ್ಧೀ ಕಲಿಸ್ತೀನಿ.

(ಬೆತ್ತದಿಂದ ಹೊಡೆದು) ಏಳೇ, ಯಾರು ನೀನು ಏಳು, ಇದರುತೆ.

ಲ :— (ಚೀರುತ್ತ) ಅಮ್ಮಾ ಅಮ್ಮಾ.

ರಾ :—<br>ಶಾ :— } ಅಯ್ಯೋ ಲಕ್ಷ್ಮಿ !

ಲ :— ತಪ್ಪಾಯಿತಮ್ಮಾ, ಆಸಿಗಿ ಆಕುವಾಗ ಇದರ ಮ್ಯಾಗ ಮಲಗಿದರೆ ಎಂಗಿರತೈತೋ ನೋಡ್ಬೇಕು ಅಂತ ಅನಿಸಿ ಅಂಗೆ ಮನಗಿದೆ. ಯಾವಾಗೋ ನಿದ್ದೆ ಬಂದುಬಿಟ್ಟದೆ.

ರಾ :— ನನಗೇನು ಗೊತ್ತು ನಿನ್ನ ರೂಮಿನಲ್ಲಿ ಲಕ್ಷ್ಮಿ ಇದು ಮಾಡಿದ್ದು ಅಂತ. ನೀನೇ ಇವಳ್ನ ಇದು ಮಾಡ್ತೀನಿ ಅಂತ ನನ್ನ ಮುಂದೆ ಇದು ಮಾಡಿ ಇದು ಮಾಡದೆಮನೇಲೇ ಇದು ಮಾಡಿ ಬಿಟ್ಟೀನೋ ಅಂತ ನಾನು ಇದು ಮಾಡಿ ನನ್ನ ಇದರಲ್ಲಿ ನಾನು ಇದು ಮಾಡ್ಬಿಟ್ಟೆ.

ಶಾ :— (ನಗುತ್ತ) ನಿಮ್ಮ ಇದಕ್ಕೆ ಇದೇ ಇಲ್ಲ ನೋಡಿ.

ರಾ :— (ನಗುತ್ತ) ಅಯ್ಯೊ ಇದೇ.

---

# ಅನಾಥಾಶ್ರಮ

## ಪಾತ್ರಗಳು

೧ ಸಂಜೀವರಾಯರು ( ಸಮಾಜ ಸುಧಾರಕ )
೨ ಸಾವಿತ್ರಮ್ಮ ( ಸುಧಾರಣೆಗೆ ಒಳಪಡದ ಅವರ ಹೆಂಡತಿ )
೩ ಶೀನಪ್ಪ - ರಾಯರ ವಕೀಲಿ ಗುಮಾಸ್ತ
ಮಿತ್ರರು ರಾವಬಹದ್ದೂರು ರಾಜಗೋಪಾಲಶೆಟ್ಟಿ
ಡಾಕ್ಟರ್ ಶೇಷಾದ್ರಿ, ಮೇಷ್ಟ್ರ ಅನಂತಯ್ಯ.

೧

[ಸಮಾಜ ಸುಧಾರಕ ಸಂಜೀವರಾಯರ ಮನೆ. ಇವರ ಹೆಂಡತಿ ಸಾವಿತ್ರಮ್ಮ ತನ್ನಲ್ಲಿಯೇ ಪೇಚಾಡುತ್ತಿದ್ದಾಳೆ. ರಾಯರು ಇನ್ನೂ ಊಟಕ್ಕೆ ಬಂದಿಲ್ಲ. ಪಕ್ಕದ ಮನೆಯ ಗಡಿಯಾರದಲ್ಲಿ ಗಂಟೆ ಹೊಡಿಯುವದು. ಹೊಡೆದಂತೆಲ್ಲ ಎಣಿಸುವಳು.]

**ಸಾವಿ:—** ಒಂದೂ, ಎರಡೂ, ಮೂರೂ, ನಾಲ್ಕೂ. ಐದೂ, ಆರೂ, ಏಳೂ, ಎಂಟೂ, ಒಂಬತ್ತು—ಹತ್ತು ! ಅಯ್ಯೋ ಹತ್ತು ಗಂಟೆ. ಇನ್ನೂ ಇವರಿಗೆ ಮನೇಗೆ ಬರಲಿಕ್ಕಾಗಲಿಲ್ವೇನೋ? ಇವರಿಗೇನು ದಶಮಿ ಇಲ್ಲ, ದ್ವಾದಶಿ ಇಲ್ಲ. ನೆನ್ನೆ ರಾತ್ರಿ ಒಂದು ಗಂಟೆ ಹೊತ್ತು ಹೇಳೀನಿ, ನೋಡೀ ನಾನು ಮೊದಲೇ ಉಪವಾಸದವಳು. ಏಕಾದಶಿ ಕಳಿಯೋದಂದ್ರೇನೆ ಪುನರ್ಜನ್ಮ ಆಗುತ್ತೆ ನನಗೆ. ಎದ್ದಕೂಡಲೆ ದಯಮಾಡಿ ಹೊರಗೆ ಹೋಗ್ಬೇಡಿ. ಒಂದು ಪಕ್ಷೆ ಹೋಗಲೇಬೇಕಿದ್ದರೆ ಒಂದು ಸಲ ಊಟ ಮುಗಿಸಿಬಿಟ್ಟೇ ಹೋಗಿ ಅಂತ. ದೇವರ ತಲೆಮೇಲಿನ ಧೂಳು ಕೊಡವಿ ಇಷ್ಟು ನೀರು ಹುಯ್ದು ಅನ್ನ ತಿಂದು ಹೋಗಿದ್ರೆ ಆಗ್ತಿರಲಿಲ್ವೆ, ಇಲ್ಲಿ ನಾನು ಸಾಯಬೇಕಲ್ಲ ಉಪವಾಸ, ಇವರ ಹೆಸರು ಹೇಳ್ತಾ. ನನ್ನ ಹಣೇಬರಕ್ಕೆ ದ್ವಾದಸಿ ಊಟ ಕೂಡ ಮಧ್ಯಾನ್ಹದ ಮೇಲೆಯೇ !

**ಶೀನ:—** ಏನು ಸಾವಿತ್ರಮ್ಮನವರೇ, ಊಟವಾಯಿತೇ ?

**ಸಾವಿ :—** ಯಾರು ಶೀನಪ್ಪನೇನು ಬಾಪ್ಪ.

**ಶೀನ :—** ಊಂಡಾಯಿತೇ ಆಗಲೆ ಅಂದೆ.

**ಸಾವಿ :—** ಹಾ, ಉಣಬೇಕಾಗಿದ್ದೆ ಇವರ ಮನೇಲಿ—ಮಾಡಿದ ಫಲಭೋಗ.

**ಶೀನ :—** ಯಾಕೆ ಸಾವಿತ್ರಮ್ಮ, ಬಹಳ ಸಿಟ್ಟಿನಲ್ಲಿದೀರಾ? ಇನ್ನೂ ಊಟ ಆಗಲಿಲ್ವೆ, ದ್ವಾದಸಿ ಪಾರ್ಣೆ ತಾನೆ ಇವತ್ತು?

**ಸಾವಿ :—** ನೋಡಿ ಶೀನಪ್ಪ, ಈ ಮಹರಾಯರ ಮನೇಲಿ ಕಾಲಿಟ್ಟಾಗಿನಿಂದ ಇದೇ ಹಣೇಬರಹ. ನನಗೆ ಇಲ್ಲಿ ಬರೋ ರೋಗನೆ ಅನ್ನಕ್ಕೆ ಅಂದ್ರೆ. ಕೋಳಿ ಕೂಗೋದರೊಳಗೆ ಅಡಿಗೆ ಮಾಡಿಬಿಟ್ಟು ತುಳಸೀಗೆ ನೀರು ಹಾಕ್ತಾ ಇದ್ದೆ. ಇಗೋ ಬಂದೆ ಅಂತ ಆದೆಲ್ಲೊ ಹೊರಟ ಮಹರಾಯ್ರು ಸುಳಿವೇ ಕಾಣೆ, ಮಧ್ಯಾಹ್ನ ಆದ್ರೂ ವೆ.

**ಶೀನ :—** ಬರ್ತಾರೆ ಬಿಡಿ, ಎಲ್ಲೋ ಅರ್ಜೆಂಟು ಕೆಲಸದ ಮೇಲೆ ಹೋಗಿರಬೇಕು ರಾಯರು.

**ಸಾವಿ :—** ಸಾಕು ಸುಮ್ನೆ ಇರಪ್ಪ, ನನಗೆ ತಿಳೀದೇ ಇವರ ಅರ್ಜೆಂಟು ಕೆಲಸ? ಕಿವಿ ಮುಚ್ಚೋ ಬಿಳಿ ಟೋಪಿ, ತಂಬೂರಿ ಚೀಲದಂಥಾ ಒಂದು ಅಂಗಿ, ಕೈಯಲ್ಲೊಂದು ಚೀಲ ಹಿಡಿದುಕೊಂಡು ಮನೆ ಮನೆ ಬಿಕ್ಷೆ ಅಲೆಯೋದು ತಾನೆ ಇವರ ಅರ್ಜೆಂಟು ಕೆಲಸ?

**ಶೀನ :—** ಏನು ಇಷ್ಟು ತಾತ್ಸರ ಮಾಡಿ ಮಾತನಾಡ್ತೀರಾ ರಾಯರ ಬಗ್ಗೆ? ನಾನು ಅವರ ಗುಮಾಸ್ತ ಅಂತ ಹೇಳ್ತಿನಿ ಅಂತ ತಿಳಕೊಳ್ಳಬೇಡಿ—

**ಸಾವಿ :—** ಅಯ್ಯೋ, ಅಲ್ಲೀಗೆ ಬಿಡಿ ಶೀನಪ್ಪ ಸಾಕು. ನಿಮ್ಮ ರಾಯರ ವಿಷಯ ಕೇಳಿ ಕೇಳಿ ನನ್ನ ಕಿವಿ ತೂತಾಗಿವೆ. ನಿನ್ನ ಗುಮಾಸ್ತಿಕೆ, ಅವರ ವಕಾಲತು, ನನ್ನ ಸಂಸಾರ—

**ಶೀನ :—** ಅವರ ವಕಾಲತ್ತಿನ ಬಗ್ಗೆ ಅಲ್ಲಮ್ಮ ನಾನು ಹೇಳ್ತಾ ಇದ್ದದ್ದು. ಹಾಗೆ ಅವರು ವಕಾಲತ್ತಿಗೆ ಮನಸು ಮಾಡಿದ್ದರೆ—

**ಸಾವಿ :—** ಸಂಸಾರ ಚೆನ್ನಾಗೆ ಆಗೋದು. ಅವರ ಹಣೇಲಿ ಬರೆ ಬಿದ್ದೆ, ಮನೆ ಮನೆ ಅಂಗಡಿ ಅಂಗಡಿ ತಿರುಪೆ ಎತ್ತಿ ಮಾದಿಗರ ಮಾರಿಗನನ್ನೋ ಇಲ್ಲ ಬೇರೆ ಯಾರದಾದರೂ ಮಕ್ಕಳನ್ನೋ ಉದ್ಧಾರ ಮಾಡೋದು.

ಅಂತ ಇಷ್ಟೆ ಸೈ ಇದು, ಮನೆಗೆ ಮಾರಿ, ಪರರಿಗೆ ಉಪಕಾರಿ ಅಂತ ಅದೇನೋ ಹೇಳ್ತಾರಲ್ಲ ಹಾಗೆ.

ಶೀನ:— ಊರಲ್ಲಿ ಜನ ಎಷ್ಟು ಹೊಗಳುತ್ತೆ ಅಂತ ತಿಳಿದಿದೀರಾ ರಾಯರನ್ನ ?

ಸಾವಿ:— ಛೆ, ಛೆ, ಹೊಗಳದೇ ಏನಪ್ಪ ಪಾಪ. ದೇವರು ಕೊಟ್ಟ ವಕೀಲಿ ಮಾಡ್ಕೊಂಡು ರಾಮಾ ಕೃಷ್ಣಾ ಅಂತ ಇರೋದು ಬಿಟ್ಟುಬಿಟ್ಟು. ಮಾನ ಮರ್ಯಾದೆ ಸಹ ಇಲ್ಲದೆ ಅಣೀ ಕಾಸು ಬಿಕ್ಷೆ ಎತ್ತಿ — ವರ್ಷಕ್ಕೆ ರಡು ನನಗೆ ಮೈ ಮುಚ್ಕೋಕೆ ಮಡಿಸೀರೆ ತರೋಕ್ಕಾಗಲ್ಲ ಅವರಿಗೆ— ಊರು ಮುಂದಿನ ಹೊಲೇರಿಗೆ ಹನ್ನೆರಡು ಗುಡಿಸಲು ಕಟ್ಟಿಸಿಕೊಡ್ತಾರಂತೆ. ಮೊನ್ನೆ ಪಾತಮ್ಮನ ಮನೇಲಿ ಅವಲಕ್ಕಿ ಕುಟ್ಟುವಾಗ ಹೆಣ್ಮಕ್ಕಳೆಲ್ಲ ಹೇಳಿ ಹೇಳಿ ನಗೆ ಮಾಡ್ತಿದ್ರು. ಅದೇನು ಮುಂಡ್ರೋ ಹರಿಜನ ಅಂತೆ. ಅದೊಂದು ಹುಚ್ಚು ಬೇರೆ ಚೆನ್ನಾಗಿ ಸೇರಿಕೊಂಡುಬಿಟ್ಟಿದೆ ಇವರ ತಲೇಲಿ. ಅಲ್ಲ ಶೀನಪ್ಪ, ದೇವರು ಪುರಾಣದಲ್ಲಿ ಹೇಳಿದಂತೆ ಒಂದಲ್ಲದೆ ಹತ್ತು ಅವತಾರ ತಾಳಿದರೂ ಉದ್ಧಾರ ಮಾಡಲಿಕ್ಕಾಗಲಿಲ್ಲ. ಈಗ ಇವರದು ಹನ್ನೊಂದನೇ ಅವತಾರ.

ಸಂಜೀ:— (ಪ್ರವೇಶಿಸುತ್ತ) ಏನೇ ಅದು, ಅವತಾರಗಳ ವಿಷಯ ಉಪನ್ಯಾಸ ಸುರು ಮಾಡಿಬಿಟ್ಟೀಯಾ ? ಮುಖ ಎಲ್ಲ ಏನು ಕೆಂಪಾಗಿದೆ! ಏನು ಶಕ್ತಿ ಅವತಾರ ತಾಳಿ ಬಿಟ್ಟಿದೀಯಾ ?

ಸಾವಿ:— ಶಕ್ತಿ ಆದರು ಆಗಬೇಕು, ಶೂರ್ಪನಖಿ ಆದರೂ ಆಗ ಬೇಕು ಇನ್ನೇನು ಮಾಡೋದು ನಿಮ್ಮಂಥವರನ್ನು ಕೈಹಿಡಿದ ಮೇಲೆ?

ಸಂಜೀ:— ಏನೇ ಈಗ ಆಗಿರೋದು ಅಂಥಾದ್ದು ಅನ್ಯಾಯ, ಇಷ್ಟು ರೇಕ್ಕೊಳ್ತಾ ಇದೀಯ ?

ಶೀನ:— ಹೋಕ್ಕೊಳ್ಳಿ ಬಿಡಿ ರಾಯರೆ. ಅದು ಅವರ ಸ್ವಭಾವ. ಅವರು ಯಾವಾಗಲೂ ಹಾಗೇ.

ಸಾವಿ:— ಏನು ಶೀನಪ್ಪ ಅದು, ಅವರು ಯಾವಾಗಲೂ ಹಾಗೆಯೇ ಅಂತ ಏನೋ ದೊಡ್ಡದಾಗಿ ಹೇಳ್ತಾ ಇದೀರಲ್ಲ ? ಏನು, ನಾನು ಯಾವಾಗಲೂ—

**ಸಂಜೀ:—** ಏನೇ ಅದು, ಮನೆಗೆ ಬಂದಕೂಡಲೆ ನಿನ್ನ ಕಿಟಿಪಿಟಿ. ನೀನೇನು ನನ್ನ ಒಂದು ಕೆಲಸಕ್ಕಾದರೂ ನೆರವಾಗ್ತೀಯಾ? ನಿನ್ನಿಂದ ಸಮಾಜಕ್ಕೇನಾದರೂ ಸೇವೆ ಆದೀತೆ?

**ಶೀನ:—** ಹೋಗಲಿ ಬಿಡಿ ಸಾವಿತ್ರಮ್ಮಾವ್ರೆ, ರಾಯರು ಯಾವಾಗಲೂ ಹಾಗೆಯೇ.

**ಸಾವಿ:—** ಇನ್ನ ಅದು ಒಂದೇ ಬಾಕಿ. ನಿಮ್ಮ ಸಮಾಜಕ್ಕೆ ಒಂದಿಷ್ಟು ಬೆಂಕೆ ಹಾಕಿತು, ನಿಮ್ಮ ಸೇವಾಕ್ಕೊಂದಿಷ್ಟು ಕಿಚ್ಚು ಹಚ್ಚಿತು. ಬೆಳಿಗ್ಗೆ ಎದ್ದು ಮಾದಿಗರ ಗುಡಿಸಲು ಪ್ರದಕ್ಷಿಣೆ ಹಾಕೋದು—ಅದೇನೋ ಹೇಳ್ತಾರಲ್ಲ ಹಾಗೆ—

**ಸಂಜೀ:—** ಇಲ್ಲಿ ನೋಡು, ನನ್ನ ಕೆಲಸದ ಮೇಲೆ ನಿನ್ನ ಟೀಕೆ ಬೇಡ. ಜನತಾಸೇವೆಯೇ ಜನಾರ್ಧನ ಸೇವೆ ಅಂತೆ. ಸಮಾಜ ಸೇವೆ ಮಾಡುವದು ನನ್ನ ಕರ್ತವ್ಯ, ತಿಳಿಯಿತೇ. ಕೈಯಲ್ಲಿರೋ ಫೈಲುಗಳನ್ನು ಮುಗಿಸಿಬಿಟ್ಟು ಇಂದೋ ನಾಳಿಯೋ ಈ ವಕೀಲಿ ಕೂಡ ಬಿಟ್ಟುಬಿಡ್ತೀನಿ.

**ಸಾವಿ:—** (ಆಕ್ರೋಶದಿಂದ) ನಾನು ಕೂಡ ನಿಮ್ಮನ್ನ ಇಂದೋ ನಾಳಿಯೋ ಬಿಟ್ಟು ಬಿಡ್ತೀನಿ.

**ಶೀನ:—** ಛೆ, ಛೆ, ಇದೇನು ಮಾತು ಸಾವಿತ್ರಮ್ಮಾವ್ರೆ. ಹಾಗನ ಕೂಡದು, ಬಿಡ್ತು ಅನ್ನಿ.

**ಸಂಜೀ:—** ಕೊಂಚ ನಿಲ್ಲು ಶೀನಪ್ಪ, ಹಾಗೇಕೆ ಅವಸರ ಮಾಡ್ತೀಯ. ಇನ್ನೂ ಬಿಟ್ಟಿಲ್ಲ, ಈಗಲೆ ಹೇಗೆ ಬಿಡ್ತು ಅನ್ತಾಳೆ?

**ಸಾವಿ:—** ಹಾಗಾದರೆ ಬಿಡೋದೆ ನಿಶ್ಚಯ. ನನಗೇನು ಪ್ರಾರಬ್ಧಾನೆ ಇಂಥವರೊಟ್ಟಿಗೆ ಬಾಳ್ವೆ ಮಾಡ್ಕೊಂಡಿರೋಕೆ? ಬಿ. ಎಲ್. ಪಾಸು ಮಾಡಿ ಕರೀ ಮುಸುಗು ಹಾಕ್ಕೊಂಡು ಅತ್ರೆ ಅಂತ ತಾನೆ ನಮ್ಮಪ್ಪ ಇವರಿಗೆ ನನ್ನ ಆಹುತಿ ಕೊಟ್ಟದ್ದು? ಇಂದಲ್ಲ ಎಂದಾದರೂ ಸರಕಾರಿ ವಕೀಲನ ಹೆಂಡತಿಯಾಗಿ ಕಾರಿನಲ್ಲಿ ಮೆರೀತೀದಮ್ಮ ನೀನು ಅಂತ ನನ್ನ ತಂದೆ ಅವರು ಹೇಳಿದ್ದಕ್ಕಲ್ಲವೆ ಇವರನ್ನು ಕತ್ತಿಗೆ ಕಟ್ಟಿಗೊಂಡದ್ದು ನಾನು?

**ಸಂಜೀ:—** ಓಹೋ, ಇಂಥಾ ಶ್ರೇಷ್ಠ ಧ್ಯೇಯಗಳು, ಇಂಥಾ ಜೀವನದ ಗುರಿ ನಿನ್ನಲ್ಲಿವೆ ಎಂದು ಮೊದಲೆ ತಿಳಿದಿದ್ದರೆ ನಾನೇನು ನಿನ್ನ ಮದುವೆಯಾಗ್ತಿರಲಿಲ್ಲ.

**ಸಾವಿ**:— ನೀವು ಹೀಗೆ ಮನೆ ಹಾಳ್ಮಾಡಿ ಮಾದಿಗರ ಗುಡಿಸಲು ಕಟ್ತೀರಿ ಅಂತ ತಿಳಿದಿದ್ರೆ ನಾನೂ ನಿಮ್ಮನ್ನ ಮದುವೆಯಾಗ್ತಿರಲಿಲ್ಲ.

**ಶೀನ** :— ಇರಲಿ ಬಿಡಿ ಈಗೇನಾಯ್ತು?

**ಸಂಜೀ** :— ಯಾವಾಗಲಾದರೂ ಬಿಡುಗಡೆ ಮಾಡಿಕೊಳ್ಳಲಿಕ್ಕೆ ಬರುತ್ತದಲ್ಲ, ಅಂತೀಯಾ?

**ಶೀನ** :— ಛೆ ಛೆ, ಹಾಗನಕೂಡದು ರಾಯರೆ.

**ಸಾವಿ**:— ಯಾಕೆ, ಅನಕೂಡದೇಕೆ? ಯಾಕೆ ನಾನೇನು ಕೆಟ್ಟು ಬಂದಿದೇನೆಯೋ? ತೌರುಮನೆ ಹಾಳಾಗಿ ಹೋಗಿದೆಯೋ, ಇಂಥ ಅಷ್ಟ ದರಿದ್ರರ ಮನೇಲಿರಲಿಕ್ಕೆ? ಸಾಗರದಲ್ಲಿರೋ ನಮ್ಮಣ್ಣನ ಮನೇಗೆ ಹೋದರೆ ನಮ್ಮಣ್ಣ ಅತ್ತಿಗೆ ಕಣ್ಣಿಗೊತ್ತಿಕೊಂಡು ಪೂಜೆ ಮಾಡ್ತಾರೆ, ಪೂಜೆ, ತಿಳಿಯಿತೆ? ನಾನು ಈಗಲೆ ಹೊರಟೆ. ಕಡೇಸಲ ನಿಮ್ಮನ್ನ ಕೇಳಿಬಿಡ್ತೇನೆ-ನೀವು ಈ ಹರಿಜನ ಈ ಸಮಾಜ ಬಿಡೋಲ್ಲ ತಾನೆ?

**ಸಂಜೀ** :— ಬಿಡೋಲ್ಲ, ಬಿಡೋಲ್ಲ, ಬಿಡೋಲ್ಲ.

**ಸಾವಿ** :— ನನ್ನಾದರೂ ಬಿಡ್ತೀರಿ, ಅವನ್ನು ಬಿಡೋಲ್ಲ ತಾನೆ?

**ಸಂಜೀ** :— ನಾನು ಯಾರನ್ನೂ ಬಿಟ್ಟಿಲ್ಲ, ನಿನ್ನೂ ಹೋಗು ಅಂತ ಹೇಳಿಲ್ಲ. ನೀನೂ ನನ್ನೊಟ್ಟಿಗೆ ಸಹಕಾರ್ಯದರ್ಶಿ ಆಗಿ ಕೆಲಸ ಮಾಡಿದರೆ ಒಂದು ಅನಾಥಾಶ್ರಮ ಕೂಡ ತೆಗೆಯೋದು ಅಂತ ನನ್ನ ಆಶೆ ಇದೆ.

**ಸಾವಿ** :— ಬೆಂಕಿ ಬೀಳ್ತು ನಿಮ್ಮ ಆಶ್ರಮಕ್ಕೆ. ನಾನಂತೂ ಹೊರಟೆ ರೈಲಿಗೆ.

( ರೈಲು ಹೊರಡುವದು. )

**ಸಂಜೀ**:- ವಕೀಲಿ ಬಿಟ್ಟೆ, ಅಂತ ಕೈಹಿಡಿದ ಹೆಂಡತಿಯೇ ಬಿಟ್ಟು ಹೋಗಲು. ಇನ್ನು ವಕಾಲತ್ತಿನ ಗುಮಾಸ್ತ ನೀನು ಏಕೆ ಇರುತ್ತೀ? ನೀನು ಕೂಡ ಹೋಗಿಬಿಡು ಶೀನಪ್ಪ.

**ಶೀನ** :— ಏನು ಮಾತು ರಾಯ್ರು, ವಕೀಲಿ ಬಿಟ್ರೆ ಮನುಷ್ಯರು ಅಲ್ವೇ? ಏನಾದರೂ ಮಾಡೋಣ ಬಿಡಿ, ದೇವರು ಬುದ್ಧಿ ಕೊಟ್ಟಂತೆ.

೨

[ ರೀಡಿಂಗ ರೂಮಿನ ಅಂಗಣದಲ್ಲಿ ಸಂಜೀವರಾವು, ರಾಮಚಂದ್ರಪ್ಪನವರು ರಾಜ ಗೋಪಾಲ ಶೆಟ್ಟಿ, ಹಾಕ್ಟರ ಶೇಷಾದ್ರಿ ಮತ್ತು ಮೇಷ್ಟ್ರು ಅನಂತಯ್ಯನವರು ಆಗ ತಾನೆ ಪೇಪರು ಓದಿ ಚರ್ಚೆಗೆ ಆರಂಭಿಸಿದ್ದಾರೆ. ]

**ಸಂಜೀ :** ನೋಡಿದೇನಯ್ಯಾ ರಾಜು, ಇವತ್ತಿನ ಲೀಡರ್ ಹೇಗಿದೆ? ಓತ್ತಾ ಇದೆ ಕಣ್ಣಲ್ಲಿ ಹಾಗೆ ನೀರು ಹೋಗ್ತಾ ಇತ್ತು ನನಗೆ.

**ರಾಜು :—** ಬಾರಯ್ಯಾ ಹಾಗಾದರೆ, ನಮ್ಮ ಚಿಕ್ಕಪ್ಪ ಒಳ್ಳೇ ನೇತ್ರ ವೈದ್ಯ ಇದ್ದಾರೆ. ಬಹಳ ಮಾಡಿ ನಿನಗೆ ಷಾರ್ಟ ಸೈಟೇ ಇರಬೇಕು.

**ಅನ :—** ಸುಮ್ನಿರೊ ರಾಜು, ಅವನೇನು ಸೀರಿಯಸ್ ಆಗಿ ಫೀಲು ಮಾಡಿ ಹೇಳ್ತಾ ಇದ್ರೆ ತಮಾಷೆ ಮಾಡ್ತೀಯಾ?

**ಶೇಷ :—** ಅಲ್ಲವಯ್ಯ, ಲೀಡರ್ ವಿಷಯ ರಾಜೂಗೆ ಹೇಳಿದ್ದು ನಿಮ್ಮದೇ ತಪ್ಪು. ಅವನಿಗೆ ಓದಲು ಬಂದ್ರೆ ತಾನೆ ಅವೆಲ್ಲ. ಅವನು ಓದಿರೋದು ಅಂದ್ರೆ ಅವರ ಚಿಕ್ಕಪ್ಪನ ಕನ್ನಡಕದ ಅಂಗಡೇಲಿರೋ ಎ ಬಿ.ಸಿ- ಬೋರ್ಡ್ ಒಂದೇ.

**ಸಂಜೀ :—** ಅಲ್ಲವಯ್ಯ, ರಾಮಪುರದಲ್ಲಿ ಅತಿವಿಲಕ್ಷಣ ಮಳೆಯಾಗಿ ಊರು ಊರೇ ಕೊಚ್ಚಿಗೊಂಡಿ ಹೋಗಿ, ಜನ, ದನಗಳ ಪ್ರಾಣಹಾನಿಯಾಗಿ ಉಳಿದಿರೋ ನಾಲ್ಕು ಜನರಿಗೆ ತಿನ್ನಲು ಅನ್ನ, ಇರಲು ಮನೆ ಇಲ್ಲದಂತಾಗಿದ್ರೆ ತಮಾಷೆ ಮಾಡಿ ನಗೆಯಾಡಲಿಕ್ಕೆ ಮನಸ್ಸಾದರೂ ಹೇಗಯ್ಯಾ ಬರುತ್ತೆ? ಅವರ ಬಗ್ಗೆ ಏನೂ ಅನಿಸೋಲ್ಲವೇನಯ್ಯಾ ನಿನಗೆ?

**ರಾಜು :—** ಇಲ್ಲ ಅಂತ ಯಾರಯ್ಯಾ ಹೇಳಿದರು? ಅನಿಸುತ್ತೆ ನನಗೆ.

**ಅನ :—** ಏನೋ ಅನಿಸೋದು ನಿನಗೆ?

**ರಾಜು :—** ವಾರಸುದಾರರು ಇಲ್ಲದೆ ಹೋದವರ ಆಸ್ತಿಯು ಏನಾಗುತ್ತೋ ಅಂತ.

**ಸಂಜೀ :—** ಧಿಕ್ಕಾರ, ಧಿಕ್ಕಾರ, ನೀವೇ ಅಯ್ಯಾ ದೇಶದ್ರೋಹಿಗಳು. ಅಜೀರ್ಣದಿಂದ ಸಾಯಲೂ ಸಿದ್ಧರಾದವರು. ಆದರೆ ಉಪವಾಸ ಸಾಯುವವರಿಗೂ ಅನ್ನ ಕೊಡದವರು ತಾನೂ ತಿನ್ನದೆ ಇತರರಿಗೂ ಕೊಡದೆ ಸಾಯುವವರು --

ರಾಜು :— ಸರಿ, ಇನ್ನ ಒರ್ತೇನಯ್ಯ. ಮೆಲ್ಲಗೆ ಪ್ರಚಾರದ ಭಾಷಣಾನೆ ಸುರು ಮಾಡಿಬಿಟ್ಟ ಈ ಮಾರಾಯ. ಇನ್ನು ಆ ಸಮಾಜ ಸೇವಾದ ಗಂಟು ಬಿಚ್ಚಿಬಿಟ್ಟ ಅಂದರೆ ಚಂದಾದ ಪಟ್ಟಿ ತಯಾರೇ ಆಗಿಬಿಡುತ್ತೆ. ಏನೋ ವಾಚನಾಲಯ, ತಂಡಾಗಿದೆ ಅಂತ ಬಂದ್ರೆ ಫ್ಲಡ್ ರಿಲೀಫ್ ಕಮಿಟೀನೇ ನಿರ್ಮಾಣ ಮಾಡಿಬಿಟ್ಟ ಈ ದೊಡ್ಡ ಮನುಷ್ಯ. ಒರ್ತೇನಯ್ಯ ಮೇಲೆ ನಮ್ಮಪ್ಪನನ್ನು ಕೂಡಿಸಿ ಬಂದಿದ್ದೇನೆ. ಮುದುಕನಿಗೆ ಬಾಯಿ ಆಡೋ ಅಭ್ಯಾಸ ಜೀರಿದೆ. ಹೋಂಟೆ.

ಸಂಜೀ :— ಏನ್ರಯ್ಯ, ನೀವಾದರೂ ಏನಾದರು ಸಹಾಯ ಮಾಡ ಬಲ್ಲಿರಾ? ಒಂದು ಅನಾಥಾಶ್ರಮ ಅಂತ ತೆಗೆದು ಅಲ್ಲಿಂದ ಒಂದು ನೂರು ಮಕ್ಕಳನ್ನ ಆದರೂ ಕರೆಯಿಸಿ ಅವರನ್ನ ಜೋಪಾನ ಮಾಡೋದು ನಮ್ಮ ಕರ್ತವ್ಯವಲ್ಲವೇ? ಏನು ಹೇಳ್ತೀರಿ ಡಾಕ್ಟರ್?

ಶೇಷ :— ನಿಮ್ಮ ಅಭಿಪ್ರಾಯವೇನೋ ಬಹಳ ಚೆನ್ನಾಗಿದೆ ನನ್ನ ಮನಸ್ಸಿಗೂ ಬಂದಿತು. ಆದರೆ ನೋಡಿ ಈಗ ದಿವಸಗಳು ಹೇಗಿವೆ, ನಿಮ್ಮಗೇ ಗೊತ್ತಿದೆ. ಧನ ಸಹಾಯ ಮಾಡುವದು ಸ್ವಲ್ಪ ಕಷ್ಟ ಸಾಧ್ಯ ಅನ್ನಿ. ಆಶ್ರಮದಲ್ಲಿರುವವರಿಗೆ ಔಷಧಿ ಕೊಡುತ್ತೇನಿ, ನನಗೇನು ಔಷಧಿ ಬೆಲೆ ಕೂಡ ಕೊಡಬೇಕಿಲ್ಲ. ನನಗೆ ಹಣ ಕೊಡಲಿಕ್ಕೆ ಇದ್ದೇ ಇರ್ತಾರೆ ರಾಜುನಂಥವರು.

ಸಂಜೀ :- - ನೀವೇನಂತೀರಿ ಮೇಷ್ಟ್ರೆ?

ಆನಂ :— ಓಹೋ, ಅಗತ್ಯ ಆಗಲಿ. ಯಥಾಶಕ್ತಿ. ಕಲಿತ ವಿದ್ಯೆಗ ವಂಚನೆ ಇಲ್ಲ. ವಿದ್ಯೆ ಹಾಗೆ ಇಟ್ಟುಗೊಂಡು ಸತ್ತು ಆಮೇಲೆ ಬ್ರಹ್ಮರಾಕ್ಷಸ ಆಗೋದು ನನಗೆ ಮಾತ್ರ ಬೇಕೇ? ಬೆಳಿಗ್ಗೆ ಒಂದು ಸಲ, ಸ್ಕೂಲು ಆದ ನಂತರ ಒಂದು ಸಲ ನಿರ್ವಂಚನೆಯಿಂದ ಆಶ್ರಮಕ್ಕೆ ಬಂದು ಓದು ಹೇಳಿ ಕೊಡ್ತೇನೆ. ಯಾರಿಗಾದರೂ ಅಭಿಲಾಷೆ ಇದ್ದರೆ ನನಗೆ ತಿಳಿದಷ್ಟು ಮಾತ್ರ ಪಿಟೀಲನ್ನೂ ಕಲಿಸ್ತೇನೆ.

ಸಂಜೀ :— ಅವರು ಸಂಗೀತ ಕಲಿಯೋಕಲ್ಲ ಕಣ್ರೀ ಇಲ್ಲಿ ಬರೋದು. ಸರಿ, ಇರಲಿ. ಯಾರಿಂದ ಎಷ್ಟು ಸಹಾಯ ಬಂದ್ರೂನು ಅದನ್ನೆ ದೊಡ್ಡದಾಗಿ ತೆಗೆದುಕೊಳ್ಳದಿದ್ರೆ ಸಮಾಜ ಸೇವೆ ಆಗೋದಾದರೂ ಹೇಗೆ? ಅದೆಲ್ಲ

ಸರಿ, ಅವರಿಗೆ ತಾರು ಮಾಡಿ ಕರಿಸಬೇಕಾಗಿದೆ. ನಿಮ್ಮ ಹತ್ತಿರ ಹಣ ಎಷ್ಟೆಷ್ಟಿದೆ ತೆಗೆಯಿರಿ.

**ಶೇಷ** :— ಏನಾದರೂ ಈಸ್ಪೇಟು ಸುರು ಆದರೆ ಇರಲಿ ಅಂತ ತಂದಿದ್ದೆ, ನಾಲ್ಕಾಣೆ ಇದೆ ನೋಡಯ್ಯ, ಬೇಕಾದರೆ ಅದನ್ನೆ ತೆಗೆದುಕೊಳ್ಳಿ.

**ಅನಂ** :— ಡಿಟೋ. ನನ್ನಹತ್ರ ನೀ ಇಸಿವಿಯ ನಾಲ್ಕಾಣೆ ಒಂದಿದೆ ತಕ್ಕೊಳ್ಳಿ.

**ಸಂಜೀ** :— ತನ್ನಿ ತನ್ನಿ, ನನ್ನ ಹತ್ತಿರವೂ ಒಂದು ನಾಲ್ಕಾಣೆ ಇರ ಬೇಕು. ತಾರು ಕಳಿಸೇಬಿಡೋಣ. ಹೇಳಿ ಕಳಿಸಿದಂತೆ ಬಂದೇಬಿಟ್ಟಿನಲ್ಲ ಶೀನಪ್ಪ.

**ಶೇಷ** :— ಹೌದು, ತಾರು ಏನೋ ಕಳಿಸಿ ಬಿಡ್ತೀರಾ. ಅವರೆಲ್ಲ ಬಂದ ಮೇಲೆ ಹೇಗೆ ಹಣಕ್ಕೆ?

**ಸಂಜೀ** :— ಹಣಕ್ಕೇನ್ರೀ, ತಾರು ಕೊಡಲಿಕ್ಕೆ ಹೇಗೆ ಹಣ ಬಂದಿತೋ ಅದಕ್ಕೂ ಹಾಗೇ ಬರುತ್ತೆ.

**ಅನಂ** :— ಶಹಬಾಸ್, ಒಳ್ಳೆ ತತ್ವಯ್ಯ ಇದು.

**ಸಂಜೀ** :— ಶೀನಪ್ಪಾ.

**ಶೀನ** :— ರಾಯರೆ.

**ಸಂಜೀ** :— ಈ ಹನ್ನೆರಡಾಣೆ ತೆಗೆದುಕೊಂಡು ಹೋಗಿ ತಾರು ಕೊಟ್ಟು ಬಂದುಬಿಡು.

**ಶೀನ** :— (ಮೆಲುದನಿಯಲ್ಲಿ) ಯಾರಿಗೆ, ಸಾವಿತ್ರಮ್ಮ ಅವರಿಗೆ ತಾನೆ ಬಂದು ಬಿಡಿ ಅಂತ.

**ಸಂಜೀ** :— ಚೆನ್ನಾಗಿದೆ ಸಮಾಚಾರ. ಅಲ್ಲವಯ್ಯ, ರಾಮಪುರ ದಿಂದ ಅನಾಶ್ರಿತ ಮಕ್ಕಳನ್ನೂ ಹೆಂಗಸರನ್ನೂ ಕಳಿಸು ಅಂತ ಅಲ್ಲಿಯ ಅಧಿಕಾರಿಗಳಿಗೆ.

**ಶೀನ** :— ಸಂತೋಷ ರಾಯರೆ. ವಕೀಲಿ ಬಿಟ್ಟು ಕೂಡಲೆ ನನ್ನ ಹೋಗು ಅಂತ ಹೇಳದಿರಲ್ಲ, ನೋಡಿದಿರಾ ಈಗ ಉಪಯೋಗ ಆಗಲಿಲ್ಲೆ? ವಕೀಲರಾದರೇನು ಸಮಾಜ ಸುಧಾರಕರಾದರೇನು. ಗುಮಾಸ್ತರಿಲ್ಲದೆ ಹೇಗೆ ಕೆಲಸ ಆದೀತು?

೩

[ ರೇಲ್ವೆ ಸ್ಟೇಶನ್ನಲ್ಲಿ ಅನಾಥಾಶ್ರಮಕ್ಕಾಗಿ ಬರಲಿರುವ ನೂರಾರು ಮಕ್ಕಳು ಹೆಂಗಸರು ಇಳಿದಿದ್ದಾರೆ. ಶೀನಪ್ಪ ಅವರೆಲ್ಲರನ್ನೂ ಕರೆದೊಯ್ಯಲು ಬಂದಿದ್ದಾನೆ. ಆ ಸ್ತ್ರೀಯರ ಗುಂಪಿನಲ್ಲಿ ಸಾವಿತ್ರಮ್ಮ! ]

**ಶೀನ** :— ( ಆಶ್ಚರ್ಯ ) ಅಯ್ಯೋ, ಸಾವಿತ್ರಮ್ಮ!

**ಸಾವಿ** :— ( ಸಂತೋಷ, ಆಶ್ಚರ್ಯ ) ಯಾರು ಶೀನಪ್ಪನೆ?

**ಶೀನ** :— ಏನ್ರಮ್ಮ, ನೀವು! ಇಲ್ಲೆ ?

**ಸಾವಿ** :— ಇನ್ನೇನು ಗತಿ ಶೀನಪ್ಪ?

**ಶೀನ** :— ನೀವು ಎಲ್ಲಿಗೆ ಅಂತ ಹೊರಟಿದ್ದು ಈ ರೈಲಿನಲ್ಲಿ?

**ಸಾವಿ** :— ಎಲ್ಲಿಗೆ ಅನ್ನಲಿಕ್ಕೆ ನನ್ನದೇನಿದೆ ಶೀನಪ್ಪ? ನೀರಿನಲ್ಲಿ ಮುಣುಮುಣುಗಿ ತೇಲ್ತಿದ್ದೆ. ಯಾವ ಮಹರಾಯನೋ, ಪುಣ್ಯಾತ್ಮ, ಅವನ ಹೊಟ್ಟೆ ತಂಣಗಿರಲಿ, ಹೊರಗೆ ಎಳದುಹಾಕಿ ಪ್ರಾಣ ಉಳಿಸಿದ ಸಧ್ಯ. ನನ್ನಂತೆ ಉಳಿದ ಈ ಇತರರನ್ನು ರೈಲಿಗೆ ತುಂಬಿ ಅದೆಲ್ಲೋ ಕಳಿಸುತ್ತಿದ್ದಾರಂತೆ ಅವರು ಇದ್ದಾರೆಯೋ?

**ಶೀನ** :— ಯಾರು, ರಾಯರನ್ನ ತಾನೇ ನೀವು ಕೇಳೋದು? ಅವರು ಅಂದೇ ನೀವು ಹೊರಟ ಮರುದಿವಸವೇ ಅದೆಲ್ಲಿಗೋ ಹೇಳದೆ ಹೊರಟು ಹೋದರು. ಅಲ್ಲ ಸಾವಿತ್ರಮ್ಮ, ನೀವು ಇಲ್ಲಿಂದ ನಿಮ್ಮಂಣನ ಹತ್ತಿರ ಅಂದರೆ ಸಾಗರಕ್ಕೆ ಅಲ್ವೆ ಹೊರಟಿದ್ದು? ಅದ್ಹೇಗೆ ರಾಮಪುರದಲ್ಲಿ ಬಂದು ನೀರಿನಲ್ಲಿ ಸಿಕ್ಕಿಬಿದ್ರಿ?

**ಸಾವಿ** :— ಅದು ದೊಡ್ಡ ಕತೆ ಇದೆ ಶೀನಪ್ಪ. ನಮ್ಮ ಅಂಣನ ಹೆಂಡತಿ ನಮ್ಮತ್ತಿಗೆ ಇಲ್ವೆ, ಆಕೆಗೂ ನನಗೂ ಸರಿ ಬೀಳಲಿಲ್ಲ. ಅಂಣನಿಗೆ ಬುದ್ಧಿ ಕಲಿಸೋಣ ಅಂತ ಹೇಳಿ ಸಿಟ್ಟಾಗಿ ಮನೆ ಬಿಟ್ಟು ರಾಮಪುರಕ್ಕೆ ಹೋದೆ.

**ಶೀನ** :— ಸರಿ, ತಿಳಿತು ಬಿಡಿ. ಅರ್ಥ ಆಯಿತು. ಅದೇನು ನಿಮಗೆ ಹೊಸದೇ?

**ಸಾವಿ:**— ಅದೆಲ್ಲೊ ಅನಾಥಾಶ್ರಮ ಅಂತಲ್ಲ ಶೀನಪ್ಪ, ಅಲ್ಲಿ ಹೇಗೋ ಸಿಕೊಂಡಿರೋದು ?

**ಶೀನ:**— ಅದಕ್ಕೇಕೆ ಸಾವಿತ್ರಮ್ಮ ಇಷ್ಟು ಯೋಚನೆ ಮಾಡ್ತೀರಾ? ಅಲ್ಲಿ ಏನಾದರೂ ಕೆಲಸ ಮಾಡೋದು.

**ಸಾವಿ:**— ನನ್ನಿಂದ ಏನು ಕೆಲಸ ಆಗುತ್ತೆ ಶೀನಪ್ಪ? ಆಗೋದಿದ್ದರೆ ಅಗತ್ಯ ಮಾಡ್ತೀನಿ,

**ಶೀನ:**— ಅನಾಥಾಶ್ರಮದಲ್ಲಿ ಒಬ್ಬರೇ ಕಾರ್ಯದರ್ಶಿ ಇದ್ದಾರ, ಗಂಡಸರು. ಈಗ ಆಶ್ರಮದಲ್ಲಿ ಇಷ್ಟು ಜನರು ಹೆಂಗಸರು ಬಂದ ಮೇಲೆ ಒಬ್ಬರು ಹೆಂಗಸರು ಸಹಕಾರ್ಯದರ್ಶಿ ಬೇಡವೆ ಅವರ ಸಹಾಯಕ್ಕೆ? ನೀವೆ ಸಹಕಾರ್ಯದರ್ಶಿ ಆದರಾಯಿತು.

**ಸಾವಿ:**— ಏನಾದರೂ ಆಗಲಿ ಶೀನಪ್ಪ, ದುಡಿಯಬೇಕು ಅನ್ನ ತಿನಬೇಕು ನೋಡು.

**ಶೀನ:**— ಇರಲಿ ಬನ್ನಿ ನೋಡೋಣ. ಆಶ್ರಮಕ್ಕಂತೂ ಹೋಗೋಣ. ಕಾರ್ಯದರ್ಶಿಗಳಿಗೆ ಹೇಳಿ ನೋಡ್ತೇನೆ.

( ತುಸು ಹೊತ್ತು ನಿಶ್ಶಬ್ದ )

**ಸಂಜೀ:**— ಏನು ಶೀನಪ್ಪ, ಒಟ್ಟು ಎಷ್ಟು ಜನ ಆದಂತಾಯಿತು ಆಶ್ರಮದಲ್ಲಿ?

**ಶೀನ:**— ನೂರಹನ್ನೆರಡು ಮಕ್ಕಳು, ಎಂಭತ್ತಾರು ಹೆಂಗಸರು ಬಂದಿದ್ದಾರೆ ರಾಯರೆ.

**ಸಂಜೀ:**— ಅಲ್ಲವೋ ಶೀನಪ್ಪ, ಇಷ್ಟು ಜನ ಹೆಂಗಸರೇ ಆಗಿಬಿಟ್ರೆ ಒಬ್ಬರಾದರೂ ಹೆಂಗಸರು ಸಹಕಾರ್ಯದರ್ಶಿ ಬೇಡವೆ?

**ಶೀನ:**— ಯಾರೂ ಇಲ್ಲ ರಾಯರೆ. ಆದರ ಆ ಗುಂಪಿನಲ್ಲಿ ಒಬ್ಬ ಹೆಂಗಸು ಮಾತ್ರ ಇದ್ದಾರೆ. ಅವರು ಆ ಕೆಲಸಕ್ಕೆ ಒಪ್ಪಬಹುದು. ಆದರೆ ಸ್ವಲ್ಪ ಸಿಡುಕಿನ ಸ್ವಭಾವ ಕಾಣುತ್ತೆ ಅವರದು. ನೀವು ಮಾತುಮಾತಿಗೆ ಕೋಪ ಮಾಡಿಕೊಂಡ್ರೆ ಸಾಧ್ಯವಿಲ್ಲ ನೋಡಿ.

**ಸಂಜೀ:**— ಕೋಪ ಎಲ್ಲಿದೆಯೋ, ಕೋಪ-ಇಲ್ಲ. ತಾಪ ಇಲ್ಲ. ಎಲ್ಲ ಅವಳೊಟ್ಟಿಗೆ ಹೋಯಿತು. ಮತ್ತೆ ಯಾರೋ ಆ ಹೆಂಣುಮಗಳು?

**ಶೀನ:**— ಇಲ್ಲಿಯೇ ಅವರನ್ನ ಕರೀತೇನೆ ಇರಿ ರಾಯರೆ…………
…………ಬನ್ನಿ ಅಮ್ಮ; (ಮೆಲ್ಲಗೆ) ಕಾರ್ಯದರ್ಶಿ ಅವರಿಗೆ ಎಲ್ಲ ಹೇಳಿಟ್ಟಿದ್ದೇನೆ. ಆದರೆ ಒಂದು ವಿಷಯ. ಅವರಿಗೆ ಮೂಗಿನ ಮೇಲೆಯೇ ಕೋಪ. ಸ್ವಲ್ಪ ಹುಷಾರಾಗಿ ಕೆಲಸ ಮಾಡಬೇಕು, ಅವರೇನಂದರೂ ಕೋಪ ಮಾಡಿಕೊಳ್ಳದೆ

**ಸಾವಿ:**— ಅಗತ್ಯ ಆಗಲಿಯ್ಯಾ ಯಾರು ತಾನೆ ಬೇಡ ಅಂತಾರೆ?

**ಶೀನ:**— ಹೋಗಿ, ಒಳಗೆ ಹೋಗಿ. ಎದುರಿನಲ್ಲಿ ಕುರ್ಚಿ ಮೇಲೆ ಕುಳಿತಿರುತ್ತಾರೆ ನೋಡಿ ಬಿಳೀ ಟೋಪಿ ಇಟ್ಟು, ಅವರೇ ಕಾರ್ಯದರ್ಶಿ. ನೀವು ಒಳಗೆ ಹೋಗಿ ನಾನೆಲ್ಲ ಬರ್ತೇನೆ

**ಸಂಜೀ:**— (ಆಶ್ಚರ್ಯ ಸಂತೋಷ) ಅಯ್ಯೋ, ನೀನೆ!

**ಸಾವಿ:**— (ಸಂತೋಷ ಆಶ್ಚರ್ಯ) ನೀವೆ, ಅಯ್ಯೋ!

**ಸಂಜೀ:**— ಏ, ಶೀನಪ್ಪ, ಬಾರೊ ಇಲ್ಲಿ, ಏನೋ ಇದು ಚೇಷ್ಟೆ?

**ಶೀನ:**— ಸಹಕಾರ್ಯದರ್ಶಿ ಅಲ್ವೇನು ಸ್ವಾಮಿ?

---

# ಗರುಡ ಪುರಾಣ

## ಪಾತ್ರಗಳು

೧ **ಯಮ** ( ಪರಲೋಕದ ಅಧಿನಾಯಕ )
೨ **ಚಿತ್ರ** ( ಯಮನ ಕಾರಕೂನ )
೩ **ಗುಪ್ತ** ( ಇನ್ನೊಬ್ಬ ಕಾರಕೂನ )
೪ **ರಂಗನಾಥ** ( ಪರಲೋಕಕ್ಕೆ ಬಂದ ಭೂಲೋಕದವ )
೫ **ಸಿರಿಯಪ್ಪ** ( ಭೂಲೋಕದ ಒಬ್ಬ ಬಡವ )
೬ **ಲಾವಣ್ಯ** ( ಭೂಲೋಕದ ಒಬ್ಬ ವಿಧವೆ )
ಅಲ್ಲದೆ ಯಮದೂತರಿಬ್ಬರು

[ ತೆರೆಯೇಳುವುದು. ಸಿಂಹಾಸನದಲ್ಲಿ ಯಮನು ಕುಳಿತಿರುವನು. ಪಂಚಗಚ್ಚೆ, ಕ್ಲೋಜುಕಾಲರ್ ಬಿಳಿಯ ಕೋಟು, ಕಾಲಲ್ಲಿ ಪಾಪೋಸು, ಕಡ್ಡಿಗೆರೆಯ ಜರಿರುಮಾಲು. ಕಂಕುಳಲ್ಲಿ ಕೊಡೆ ಧರಿಸಿದ ಚಿತ್ರಗುಪ್ತರ ಪ್ರವೇಶ. ]

**ಚಿತ್ರ-ಗುಪ್ತ :—** ( ಇಬ್ಬರೂ ಒಮ್ಮೆಲೆ ) ಯಮಧರ್ಮ ಮಹಾರಾಜರಿಗೆ ಜೈ !

**ಯಮ :—** ಜೈ ಇರಲಯ್ಯಾ ಚಿತ್ರಗುಪ್ತರೇ ! ಕೆಲಸವನ್ನು ಬೇಗನೆ ಶುರು ಮಾಡೋಣ. ಎಷ್ಟು ಕೇಸುಗಳಿವೆಯೋ ನೋಡಿ....ಈ ದಿನಕ್ಕೆ ?

**ಚಿತ್ರ :—** (ಕಿಸೆಯಲ್ಲಿಯ ದಾರ ಕಟ್ಟಿದ ಕನ್ನಡಕವನ್ನು ಹೊರಕ್ಕೆ ತೆಗೆದುಕೊಂಡು ಮೂಗಿಗೇರಿಸಿ, ದಾರದಲ್ಲಿ ತಲೆ ತೂರಿಸಿ, ಕನ್ನಡಕದ ಮೇಲಿನಿಂದ ದೊಡ್ಡ ಡೈರಿ ಒಂದರಲ್ಲಿ ನೋಡಿ) ಮೂರು ಕೇಸುಗಳಿವೆ ಪ್ರಭೂ, ಇವತ್ತು. (ಎದುರು ಬದುರು ಇರುವ ಕುರ್ಚಿಗಳಲ್ಲಿ, ಮೇಜುಗಳ ಮುಂದೆ ಇಬ್ಬರೂ ಕೂಡುವರು.)

**ಯಮ :—** ಬಹುಶಃ ಚಿಕ್ಕವೇ ಇರಬಹುದು; ಬೇಗನೆ ಮುಗಿಸಿ ಸ್ವಲ್ಪ ನರ್ತನಕ್ಕೆ ಹೋಗಬೇಕಯ್ಯಾ ಇವತ್ತು. ಬಹಳ ಒತ್ತಾಯ ಮಾಡಿದಾನೆ, ಪಾಪ, ಇಂದ್ರ ! ಈ ಹಾಳು ಯುದ್ಧ ಸುರೂ ಆದಂದಿನಿಂದಂತೂ ಆದಿತ್ಯವಾರವಿಲ್ಲ, ಹಬ್ಬವಿಲ್ಲ, ಹುಣ್ಣಿವೆಯಿಲ್ಲ....

( ಅಷ್ಟರಲ್ಲಿಯೆ ನಾಮಧಾರಿಯಾದ ರಂಗನಾಥನನ್ನು ಎಳೆದುಕೊಂಡು ಇಬ್ಬರು ದೂತರು ಬರುವರು. )

**ದೂತರು :—** ( ಇಬ್ಬರೂ ಒಮ್ಮೆಲೆ ) ಯಮಧರ್ಮ ಮಹಾರಾಜ್ಕೀ ಜೈ!

**ಯಮ :—** ( ರಂಗನಾಥನನ್ನು ನೋಡಿ ನಗುತ್ತ ) ಇವನಾರಯ್ಯಾ? ತಿರುಪತೀ ವೆಂಕಟರಮಣನ ಡೂಪ್ಲಿಕೇಟ್ ಇದ್ದಂತಿದ್ದಾನೆ. ಊಂ ಆಗಲಿ, ಮತ್ತೆ ಶ್ರಾದ್ಧನೇಮ!

( ದೂತರು ರಂಗನಾಥನನ್ನು ಬಾಕ್ಸಿನಲ್ಲಿ ನಿಲ್ಲಿಸುವರು. )

**ಗುಪ್ತ :—** ಹೂಂ. ಹೇಳಯ್ಯಾ!

**ರಂಗ :—** ದೇವರೆದುರಿಗೆ, ಪ್ರಮಾಣಮಾಡಿ ನಿಜವನ್ನೇ ಹೇಳುತ್ತೇನೆ.

**ಚಿತ್ರ :—** ( ನಡುವೇ ಬಾಯಿಹಾಕಿ ಸಿಟ್ಟಿನಿಂದ ) ಬಾಯಿ ಮುಚ್ಚೋ ಭೂಲೋಕದವಂತೆ-ನಿಜವನ್ನೇ ಹೇಳುತ್ತಾನಂತೆ–ದೇವರಂತೆ! ಪ್ರಭೂ — ಪ್ರಮಾಣ ಭೂಲೋಕದವರಿಂದ ಮಾಡಿಸುವುದರಲ್ಲಿ ಏನೂ ಅರ್ಥವಿಲ್ಲ ನಿಜವನ್ನೇ ಹೇಳುತ್ತೇನೆಂದು ಪ್ರಮಾಣಮಾಡಿ, ಸಹಸ್ರ ಸುಳ್ಳುಗಳನ್ನು ಹೇಳಿ ಹೇಳಿ ಅಭ್ಯಾಸವಾಗಿದೆ ಇವರಿಗೆ.

**ಯಮ :—** ಅಹುದಯ್ಯಾ ಚಿತ್ರಾ, ಸರಿಯಾಗಿ ಹೇಳಿದೆ. ಇವನೇಕೆ ನಿಜ ಹೇಳಬೇಕು? ನಿಮ್ಮ ರಜಿಷ್ಟರುಗಳಿಲ್ಲವೇನು? ಊಂ. ಜರುಗಲಿ ಜರುಗಲಿ ಮುಂದಿನ ಕೆಲಸ!

**ಚಿತ್ರ :—** ( ರಂಗನಾಥನನ್ನು ಕುರಿತು ಗಂಭೀರವಾಣಿಯಿಂದ ) ಹೆಸರೂ?

**ರಂಗ :—** ರಂಗನಾಥ!

**ಗುಪ್ತ :—** ( ಗಟ್ಟಿಯಾಗಿ ತನ್ನಲ್ಲಿಯೇ ) ಪ ಫ ಬ ಭ ಮ ಯ ರ-ರ-ರಂಗನಾಥ ( ಪುಸ್ತಕದಲ್ಲಿ ಹುಡುಕುವನು. )

**ಚಿತ್ರ :—** ವಯಸು?

**ರಂಗ :—** ಐವತ್ತೆರಡು!

**ಯಮ :—** ( ಸಿಟ್ಟಿನಿಂದ ) ಆ ಮಗಳ ಗಂಡನಾದ ಬ್ರಹ್ಮಗೆ ಬುದ್ಧಿ ಇದ್ದರಲ್ವೆ! ಒಂದು ಸಾವಿರ ಸಲ ಹೇಳಿದ್ದೇನೆ, ಈ ಭೂಲೋಕದವರಿಗೆ ಹೆಚ್ಚಿಗೆ ಆಯುಸ್ಸು ಹಾಕ್ಬೇಡಯ್ಯಾ ಅಂತ! ಒಂದೊಂದು ದಿನಕ್ಕೇ ಒಂದು ರಜಿಷ್ಟರು ತುಂಬಿಸೋ ಮಹಾರಾಯರು ತುಂಬಿದ್ದಾರೆ ಭೂಲೋಕದ ತುಂಬಾ!

ಚಿತ್ರ :— ಜೀವನೋಪಾಯ ?

ರಂಗ :— ದೇವರ ನಾಮ !

ಯುವ :— (ಆಶ್ಚರ್ಯದಿಂದ) ದೇವರ ನಾಮ ? ಇದೇನಯ್ಯಾ, ಹೊಸ ಮಾದರಿ ? (ಗುಪ್ತನನ್ನು ಕುರಿತು) ಓದಯ್ಯಾ ಗುಪ್ತಾ, ಇವನ ಕತೆ ಏನಿದೆ ?

ಗುಪ್ತ :— (ಓದುವನು) ವಿಷ್ಣುವಿನ ಗುಡಿಯ ಅರ್ಚಕ. ವಿಗ್ರಹವನ್ನು ತೊಳೆಯುವುದು, ಬಟ್ಟೆ ಉಡಿಸಿ ಒಡವೆಗಳನ್ನಿಡುವುದು— ಇವನ ದಿನವಹಿ ಕೆಲಸ. ಬಂದ ವೇಷಧಾರಿಗಳಿಂದ ತೆಂಗಿನಕಾಯಿಯನ್ನೂ ಒಂದಾಣೆಯ ದಕ್ಷಿಣೆಯನ್ನೂ ವಸೂಲು ಮಾಡಿ, ಅರ್ಧಾಣೆಯಷ್ಟು ಮಾತ ಕೊಬ್ಬರಿ ಕೇಳಿದವರಿಗೆ ಹತ್ತಿರವಿಂತೆ ಕಾಯಿ ಒಡೆದು, ಆ ಕೆಳಗಿನ ಬಟ್ಟಲುಗಳನ್ನು ಅವರಿಗೆ ಕೊಡುವನು.

ಯುವ :— (ನಗುತ್ತ) ಶಾಬಾಸ್ ! ಒಹಳವಿದ್ದಂತಿದೆ ಇವನ ಕತೆ.. ಕಡೆಯ ಪುಟವನ್ನೋದು ನೋಡೋಣ ! ಅಲ್ಲಲ್ಲಿ ಟೂಕಿ ಓದಿಬಿಡು !

ಗುಪ್ತ :— (ಪುಟಗಳನ್ನು ಮಗುಚಿ ಹಚ್ಚುತಿರುವುತ್ತಾ) ದೇವರ ವಿಗ್ರಹದ ಮೇಲಿದ್ದ ಬಂಗಾರದ ನಾಮಗಳನ್ನು ಇವನು ಕದ್ದು, ಅಕ್ಕಸಾಲಿಗರ ಅರ್ಜುನಾಚಾರಿಯ ಹತ್ತಿರ ಕರಗಿಸಿ, ಎರಡು ಪವಿತ್ರದ ಉಂಗುರಗಳನ್ನು ಮಾಡಿಸಿಕೊಂಡು ಜನಿವಾರದಲ್ಲಿ ಹಾಕಿಕೊಂಡಿದ್ದಾನೆ.

ಯುವ :— ಸಾಕು ಸಾಕು ; ಹಾಗಾದರೆ ನಿಜವಾಗಿಯೂ ದೇವರ ನಾಮವೇ ಇವನ ಜೀವನೋಪಾಯ ! ಏನಯ್ಯಾ ರಂಗನಾಥಾ, ಕೇಳಿದೆಯಲ್ಲ, ಇದೆಲ್ಲ ನಿಜವೇನು ?

ರಂಗ :— ನಿಜ ಪ್ರಭೂ ; ಆದರೆ . .

ಯುವ :— (ಅಪ್ಸರಲ್ಲಿಯೇ) ಆದರೆ ಏನಯ್ಯಾ ಗೀದರೆ ? ಏನು ನಿನ್ನ ಸವಾಲು ?

ರಂಗ :— ಮಹಾಪ್ರಭೂ ! ಅನೇಕ ಪುಣ್ಯಕಾರ್ಯಗಳನ್ನೂ ಮಾಡಿದ್ದೇನೆ. ಹೊಸದಾಗಿ ಕಟ್ಟಿಸುತ್ತಿದ್ದ ಆಂಜನೇಯನ ಗುಡಿಗೆ ಚಂದಾ ಹಣದಿಂದ ಒಂದು ಮಂಟಪ ಹಾಕಿಸಿದ್ದೇನೆ. ವಡ್ಡರು ನನ್ನ ಸಾಲಗಾರರಾಗಿದ್ದರಿಂದ, ಅದರ ಖರ್ಚಿನಲ್ಲಿಯೇ ಹಾಕಿಸಿದ್ದೇನೆ !

ಚಿತ್ರ :— 'ರಂಗನಾಥನ ಸೇವಾ' ಎಂದು ಹೆಸರು ಹಾಕಿಸಿರುವಿಯೇನು ಗೋಡೆಯ ಮೇಲೆ ?

**ರಂಗ:**— (ಹೆಮ್ಮೆಯಿಂದ) ಅಹುದು ಸ್ವಾಮಿ; ಐದು ರೂಪಾಯಿ ಕೊಟ್ಟು ಹಾಕಿಸಿದ್ದೇನೆ!

**ಯಮ:**— ಸರಿ.. ಮುಗಿಯಿತು ಹಾಗಾದರೆ! ಒಡ್ಡರ ಮೇಲಿನ ಸಂಚನೇ ಒಂದು, ಹೆಸರು ಹಾಕಿಸಿದುದು ಎರಡು! ಉಂ, ಇನ್ನು.

**ರಂಗ:**— (ನೆನಪು ಮಾಡಿಕೊಂಡು) ಅದರಲ್ಲಿ ಉಳಿದ ಹಣದಿಂದ ಮೂರು ಸಲ.. ದೇವರಿಗೆ ಏಕಾಂತಸೇವಾ ಮಾಡಿಸಿದ್ದೇನೆ ಪ್ರಭೂ!

**ಗುಪ್ತ:**— [ಮೆಲ್ಲನೆ ಎದ್ದು] ಆ ಪುಣ್ಯ ವಡ್ಡರ ಹುಲಗಪ್ಪನಿಗೆ ಹೋಗಿದೆ ಪ್ರಭೂ!

**ಯಮ:**— ಸರಿಯಪ್ಪಾ, ಏನು ಮುಗಿಯಿತೋ ಇಲ್ಲವೋ.. ನಿನ್ನ ಸವಾಲು?

**ರಂಗ:**— ಅಧ್ವೈತ ಮತ ಖಂಡನಮಾಡಿ, ಕಾಶೀ ಮತ್ತು ಶೃಂಗೇರಿ ಪೀಠದ ಮಹಾಮಹೋಪಾಧ್ಯಾಯರನ್ನು ವಾದದಲ್ಲಿ ಗೆದ್ದಿದ್ದೇನೆ ಸ್ವಾಮಿ!

**ಯಮ:**— ಒಳ್ಳೇದು. ಮುಂದಿನ ಜನ್ಮದಲ್ಲಿ ಮೋಟಾರು ಹಾರ್ನ ಆಗಿ ಹುಟ್ಟು! (ಚಿತ್ರಗುಪ್ತನನ್ನು ಕುರಿತು) ಇವನು ಏಕಯ್ಯಾ ಸತ್ತ?

**ಚಿತ್ರ:**— [ರಿಜಿಸ್ಟರು ನೋಡಿ] ಅಜೀರ್ಣದಿಂದ ಮಹಾ ಸ್ವಾಮಿ!

**ಯಮ:**— ಅಜೀರ್ಣದಿಂದ ಸಾಯುವಾಗಲೂ ಬಂಗಾರವನ್ನು ಕಳವು ಮಾಡಿದ ಇವನನ್ನು. ಬಂಗಾರದಂತೆ ಪುಟಕ್ಕೆ ಹಾಕಿರಿ!

[ದೂತರು ಎಳೆದು ಒಯ್ಯುವರು ರಂಗನಾಥನು ಕುಯ್ಯೋ ಮರ್ರೋ ಎನ್ನುತ್ತ ಅಳುವನು.]

(ಚಿತ್ರಗುಪ್ತನನ್ನು ಕುರಿತು) ಒಳ್ಳೆ ಚಮತ್ಕಾರವಲ್ಲಯ್ಯಾ ಇದು! ಭೂಲೋಕದಲ್ಲೆಲ್ಲ ಬರ. ಬಡತನ ಅಂತ ಅಳ್ತಾ ಇದ್ರೆ, ಇವನು ಹೇಗಯ್ಯಾ ಅಜೀರ್ಣದಿಂದ ಸತ್ತ?

**ಚಿತ್ರ:**— ಅಹುದು ಪ್ರಭೂ, ಇವನೊಬ್ಬ ಅಜೀರ್ಣದಿಂದ ಸತ್ತಿದ್ದಕ್ಕೆ ಅಲ್ವೇ, ನೊನ್ನೆ ನಾಲ್ಕು ಮಂದಿ ಅನ್ನ ಇಲ್ಲದಲೆ ಸತ್ತದ್ದು! ಅದೇ ಅನ್ನ ಎಲ್ಲರೂ ಉಂಡ್ರೆ ಹೀಗೇಕಾಗುತ್ತಿತ್ತು ಭೂಲೋಕದ ಹಣೇಬರಹ?

[ಆಸ್ತಿಗತ ಬಂಧನವಾದ, ಬಡಕಲು ಮೈಯ್ಯ ಸಿರಿಯಪ್ಪನನ್ನು ಇಬ್ಬರು ದೂತರು ಎಳೆದುಕೊಂಡು ಬಂದರು]

**ದೂತರು:**— ಯಮಧರ್ಮ ಮಹಾರಾಜಕೀ ಜೈ!

**ಯಮ:**- ಇವನೇನಯ್ಯಾ ಅಖಂಡ ಮಂಡಿತ ರಾಜಮಾನ್ಯ ರಾಜಶ್ರೀ ಬರದಾಗ್ರಗಣ್ಯ ಬಿರುದಾಂಕಿತನಂತಿದ್ದಾನೆ ಸತ್ಯಾಗ್ರಹ ಮಾಡಿ

ಸತ್ತನೇನು ? ಗಾಳಿಯೋ ಇವನ ಆಹಾರವಿರಬಹುದು; ಊಂ ! ಜರುಗಲಿ. ಶುಕ ಉವಾಚ.

[ಬಾಕ್ಸನಲ್ಲಿ ದೂತರು ನಿಲ್ಲಿಸುವರು]

**ಚಿತ್ರ** :— ಹೆಸರು ?

**ಸಿರಿಯಪ್ಪ** :— ರಂಗನಾತಪ್ನೋರ್‍ರೀ ಅವರ ಹೆಸರು !

**ಗುಪ್ತ** :— [ಸಿಟ್ಟಿನಿಂದ] ನಿನ್ನ ಹೆಸರ್ಹೇಳೋ ಅಂದರೆ ! ಅವರು ಯಾರೋ ?

**ಸಿರಿ** :— ನನಗ್ ಗಲ್ಮಾಡಿಸಿದವರು ಬುದ್ಧೀ.

**ಯಮ** :— (ನಗುತ್ತ) ಓಹೋ ಗಲ್ಲು ಬೇರೆ ಆಯಿತೋ . . ಈ ಅಸ್ಥಿ ಪಂಜರಕ್ಕೆ ?

**ಚಿತ್ರ** :— ನಿನ್ನ ಹೆಸರೇನೋ ?

**ಸಿರಿ** :— ನಾನು ಸಿರಿಯಪ್ಪನ್ರೀ !

**ಯಮ** :— ದರಿದ್ರಪ್ಪನಾದ ಸಿರಿಯಪ್ಪನೇ ! ಯಾಕೋ ಸತ್ತೆ ?

**ಸಿರಿ** :— ಗಲ್ಲಾಗಿ, ಪ್ರಾಣದ ಜೀವ್ಹೋಗಿ, ನಾಡಿ ನಿಂತು ಸತ್ತೋದ್ರೆ ಮಾಸೋಮಿ !

**ಯಮ** :— ಗಲ್ಲೇಕಾಯಿತೋ ನಿನಗೆ ?

**ಸಿರಿ** :— ಏಳೆದ್ನೆಲ್ಲ ಬುದ್ಧೀ, ರಂಗಾಣಪ್ನೋರು ಮಾಡ್ಸಿದ್ರೂ ಅಂತ.

**ಯಮ** :— ಯಾಕೋ ?

**ಸಿರಿ** :— ಮತ್ತೆ ಕೊಂದ್ನೆಲ್ಲ ಸಾಮಿ, ಆ ಯಮ್ಮನ ಗೆಣೆಕಾರನ್ನ !

**ಚಿತ್ರ** :— ಯಾ ಅಮ್ಮನ ಗೆಣೆಕಾರನನ್ನೊ ?

**ಸಿರಿ** :— ಆಯಮ್ಮ ಬುದ್ಧೀ, ರಂಡೆಮುಂಡೆ. ರಂಗನಾತಪ್ನೋರ ಅಣ್ಣನ ಎಡ್ತಿ !

**ಯಮ** :— ಅವನನ್ನು ಏಕೋ ಕೊಂದಿ ?

**ಸಿರಿ** :— ಮತ್ತೆ, ರಂಗನಾತಪ್ನೋರ ಮಾತಿನ ಮ್ಯಾಗೆ.

**ಯಮ** :— ಅಂತಹ ಕೆಲಸ ಏಕಯ್ಯಾ ಮಾಡ್ಬಿಟ್ಟೆ ?

**ಸಿರಿ** :— ಈಗಾರ ಏನನ್ಯಾಯ ಆತು ಮಾಸಾಮಿ ? ನಾಸಿದ್ರೆ ದಿನಕ್ಕೆರಡಾಣೆ ಕೂಡಾ ತರ್‍ತಿದ್ದಿಲ್ಲ. ಒಮ್ಮೆಲೆ ಇನ್ನೂರು ರೂಪಾಯಿ ಗಂಟು ಕೊಟ್ಬಿಟ್ರು ಬಂದೆ ಸಾಮಿ, ನನ್ನ ಎಡ್ತಿ ಕರೇ ಲಚ್ಚೀಗೆ.

**ಯಮ :—** ಎಲ್ಲಿಯವಯ್ಯಾ ಇನ್ನೂರು ರೂಪಾಯಿ ?

**ಸಿರಿ :—** ಏಳಿದ್ನೆಲ್ಲ ಸಾಮಿ, ರಂಗನಾತಪ್ನೋರ್ವು ಅಂತ ! "ಕುಡುದು ಕೊಲ್ಲಲಿ ಸಿರಿಯಾ, ಈಗೇನು ವಕೀಲ್ರು ಬರೀ ಜಟ್ಕಾ ಬಾಡಿಗ್ಗೆ ಬರ್ತಾರೆ ; ನಾನಿರ್ತೀನಿ" ಅಂದ್ರು. ಮುದ್ದಿಲ್ದಾನs ಒಂದು ಮಗಾ ಸತ್ತು ಬುದ್ಧೀ ನಂದೂ. 'ರೊಟ್ಟೀಗೆ ಯಿಟ್ಟಿಲ್ದಾಗ, ಸೆಟ್ಟಿಗ್ಯಾಕ ಸಿಂಗಾರದ ಪೇಟ' ಅಂತ ಅನಿಸ್ತು ಸಾಮಿ! ಏನಾರ ಮಾಡಿ ಬಿಡ್ಸಿಗೊಂತೀನೇಳಲೆ' ಅಂದ ರಂಗನಾತಪ್ನೋರು ಬೆಳಗಾಗೋದ್ರೊಳಗೆ ಪೋಲೀಸರನ್ನ ತಂದು, ನನ್ನ ಜಮಾಯಿಸಿ ಬಿಟ್ರಲ್ಲ ಜೇಲಿನಲ್ಲಿ!

ನಾನೇನು ಎದರಲಿಲ್ಲ ಸಾಮಿ. ಇಂತಿಂತವರು ಇಂಗೀಂಗೆ ಅಂತ ಜಡ್ಜೀ ಮುಂದೆ ರಂಗನಾತಪ್ನೋರ ಕಿತಾಪತಿ ಎಲ್ಲಾ ಬೈಲಿಗೆಳೆದು ಬಿಟ್ಟೆ ; ಅಂದರೆ ಮಂಕುಗಳೆಲ್ಲ ಕೋರ್ಟಿನಲ್ಲಿ ನ‍್ನ ನೋಡಿ ನಕ್ಕು ಬಿಡೋದಾ! ಇನ್ನೂರೆಕರೆ ಜಮೀನು ಐತೆ, ಅದೇಸೋ ರೂಪಾಯಿ ಗೌರ್ಮೆಂಟು ಸರ್ಕಾರಕ್ಕೆ ಅದೇನೋ ಕಟ್ತಾನ, ಬ್ರಾಂಬ್ರಾತ, ಅಂತಾ ದೊಡ್ಡ ಮನಿಶಾ ಯಿಂತಾದ್ಯಾಕೆ ಮಾಡ್ಯಾನೂ ಅಂತ ಆ ಬೆರಿಕಿ ವಕೀಲ ಅಂದು ಮೋಜು ಗುದ್ದಿದ್ನೆ ; ತನ್ನ ಬುಕ್ನೋಡಿ ಜಡ್ಜಿ ನನಗೆ 'ಗಲ್ಲು' ಅಂದ್ಬುಡೋದಾ? ಆತು ಈಗೆ ಪಾಡಾತು, ಇಲ್ಲೆ ನಿನ್ಗಾಗೂ ಬಲು ವ್ಯೆಮುರಿಯ ದುಡ್ತ ಅಂತಲ್ಲ ಸಾಮಿ! ಆತು ಬಿಡು ; ದುಡಿಸಿ ಅನ್ನ ಹಾಕಂಗಿದ್ದರೆ, ಇಲ್ಲೇ ಪಾಡು [ದೂತರ ಕಡೆಗೆ ಕೈ ತೋರಿಸಿ] ಇವರ‍್ನ ಕಳಿಸಿ, ನನ್ನ ಕರೇ ಲಚ್ಮಿನ್ನೂ ಕರೆಸಿ ಬಿಡಬಾರ್ದೆ? ಅತ್ತು ಅತ್ತು ಸಾಯ್ತು ಕೋಡಿ, ನಾನ್ಬಿಟ್ಟು ಬಂದೇ ಅಂತ !

**ಯಮ:—** ಸರಿ, ಚೆನ್ನಾಯಿತು, ಏನಯ್ಯಾ ಚಿತ್ರಗುಪ್ತರೇ ; ನನಗೇ ತಂದೊಡ್ಡಿದನಲ್ಲ. ಏನು ಉಪಾಯ ?

**ಚಿತ್ರ:—** ಇದೂ ವಿಷ್ಣುನ ಕೋರ್ಟಿಗೆ ಕಳೀಸಿಬಿಡೋದು ಮೇಲು. ನನಗೇನೂ ತೋಚವೊಲ್ಲದು !

**ಯಮ :—** [ಸಿಟ್ಟಿನಿಂದ] ತೋಚೋ ಹಾಗಿದ್ರೆ ನೀನೂ ಒಬ್ಬ ಯಮನೇ ಆಗ್ತಿದ್ದಿ, ಗುಮಾಸ್ತನೇಕಾಗ್ತಿದ್ದಿ ? ಯಾರೋ ತಲೆಯಿಲ್ಲದವನು ಅಂದಿದಾನೆ 'ಅರಿಯೆ ಅನ್ನುವುದು, ಅರಸಿನ ಕೆಲಸ' ಅಂತ. 'ಅರಿಯೆ ಅನ್ನೋದು ಆಳಿನ ಕೆಲಸ, ಅವನೊಟ್ಟಿಗೆ ಆಳೋದು ಅರಸಿನ ಕೆಲಸ'.

ಒಳ್ಳೇ ಫಜೀತಿ ಇಲ್ಲಯ್ಯಾ ಇವು! ಊಂ, ಇರಲಿ ನೋಡೋಣ ; ನೀನೊಳ-
ಗಿರಯ್ಯಾ.

[ ದೂತರು ಸಿರಿಯಪ್ಪನನ್ನು ಒಳಗೆ ಒಯ್ಯುವರು. ಲಾವಣ್ಯವನ್ನು ಕರೆದು
ಕೊಂಡು ಬರುವರು. ]

**ದೂತರು** :— ಯಮಧರ್ಮ ಮಹಾರಾಜಕೀ ಜೈ !

**ಯಮ** :— ಇದೇನಯ್ಯಾ! ಯಾರೋ ಹೆಂಗಸನ್ನು ತಂದುಬಿಟ್ರಿ?
ಊಂ, ಆಗಲಿ ಶಿಷ್ಟಾಚಾರ ಮತ್ತೆ.

( ಬಾಕ್ಸಿನಲ್ಲಿ ನಿಲ್ಲಿಸುವರು. )

**ಚಿತ್ರ** :— ನಿನ್ನ ಹೆಸರೇನಮ್ಮಾ?

**ಲಾ** :— ಲಾವಣ್ಯ ಅಂತ ಕರಿತಿದ್ರು ನನ್ನೊಡೆಯಾ !

**ಗುಪ್ತ** :— ವಯಸ್ಸು ?

**ಲಾ** :— ಹತ್ತೊಂಬತ್ತು !

**ಯಮ** :— ಅಯ್ಯೋ ಚಿಕ್ಕವಳಲ್ಲಯ್ಯಾ ಪಾಪ ! ನೀನು ಹೇಗಮ್ಮಾ
ಸತ್ತೆ ?

**ಲಾ** :— ನೇಣು ಹಾಕಿಕೊಂಡೆ ಒಡೆಯಾ!

**ಯಮ** :— ಅಯ್ಯಯ್ಯೋ! ಅಂತಹದೇನು ಬಂದಿತಮ್ಮಾ?
ನೋಡಯ್ಯಾ ಗುಪ್ತಾ, ಲಾವಣ್ಯ ಅಂತೆ ಹೆಸರು!

**ಗುಪ್ತ** :— ಪ ಫ ಬ ಭ ಮ ಯ ರ ಲ ವ ಶ ಷ ಸ . .

**ಚಿತ್ರ**: — (ಸಿಟ್ಟಿನಿಂದ) ಹೂಂ ಹೂಂ ಹೂಂ— ಹಳಕ್ಷ ಳ. ಏನಯ್ಯಾ.
ಕಕಾ ಕಿಕೀ ಕೂಡಾ ಹೇಳ್ಬಿಡ್ತೀ ಏನು? ರಂಗನಾಥನ ಪುಟದ ಮೇಲೆ
ಇರುತ್ತೇ ನೋಡಯ್ಯಾ.

**ಲಾ** :— (ಗಾಬರಿಯಿಂದ) ಅವರೂ ಇಲ್ಲಿಗೆ ಬರ್ತಾರೇನು ಸ್ವಾಮೀ?
ಹಾಗಾದರೆ ನನ್ನನ್ನು ಕಳಿಸಿಬಿಡಿ ಬೇಗ!

**ಯಮ** :— ಏಕಮ್ಮಾ; ರಂಗನಾಥನೆಂದರೆ ಭಯಪಡುತ್ತೀ? ಏನು
ವಿಷಯ ?

**ಲಾ** :— ಅವರೇ ನನ್ನ ಈ ಗತಿಗೆ ತಂದದ್ದು, ಹಾಳುಮಾಡಿದ್ದು
ಎಲ್ಲ! ನನ್ನೊಡೆಯಾ, ಅವರ ನೆನವು ಬಂದರೆ ಮೈಯೆಲ್ಲಾ ಜುಂ ಎನ್ನುತ್ತೆ.

**ಯಮ** :— ಏನೂ ಭಯ ಪಡಬೇಡವಮ್ಮಾ. ಅಪ್ಪನು ಆಗಲೆ ಬೇಯು-ತ್ತಿದ್ದಾನೆ. ಓದಯ್ಯಾ ಗುಪ್ತಾ, ಈ ಕೂಸಿನ ಕಥೆಯಾದರೂ ಏನಿದೆ?

**ಗುಪ್ತ** :— (ಓದುವನು) ಏಳನೇ ವರ್ಷದಲ್ಲಿ ಇವಳನ್ನು, ರಂಗನಾಥನ ಅಣ್ಣನಾದ ನಲವತ್ತೆರಡು ವರ್ಷದ ತಿರುವೆಂಕಟಪ್ಪಗೆ ಮೂರನೇ ಸಂಬಂಧಕ್ಕೆ ಕೊಟ್ಟಿದ್ದರು. ಐದಾರು ವರ್ಷಗಳಲ್ಲಿಯೇ ತಿರುವೆಂಕಟನು ಸತ್ತನು. ಸ್ವಲ್ಪ ದಿವಸಗಳಲ್ಲಿಯೇ, ಇವಳ ಗುಣ ನಡತೆಗಳು ಸರಿಯಾಗಿಲ್ಲವೆಂದೂ, ಕೇಶಮುಂಡನಕ್ಕೆ ಒಪ್ಪಲಿಲ್ಲವೆಂದೂ, ರಂಗನಾಥನು ಇವಳನ್ನು ಮನೆಯಿಂದ ದೂಡಿ, ಕುಲಗುರುಗಳಿಂದ ಬಹಿಷ್ಕಾರವನ್ನು ಹಾಕಿಸಿದನು. ಇವಳ ಹೆತ್ತ ತಾಯ್ತಂದೆಗಳು ಸಹ ಇವಳನ್ನು ತೆಗೆದುಕೊಳ್ಳಲು ಸಂಕೋಚಪಟ್ಟು, ಬುದ್ಧಿ ಹೇಳಿ, ಹೊರಕೋಣೆಯಲ್ಲಿಟ್ಟರು. ಕಡೆಗೊಂದು ದಿನ ಇವಳು ಒಂದು ಮಗುವನ್ನೇ ಹೆತ್ತು....

**ಲಾ** :— (ಅಳುವಳು)

**ಲಾ** :— (ನೀರುಗಣ್ಣನ್ನು ಒರಸುತ್ತ) ಗಂಡುಕೂಸು ಒಡೆಯಾ, ಬಹಳ ಚೆನ್ನಾಗಿತ್ತು. ಇದ್ದರೆ ಹೇಗೋ ಎಂದು ಭಯ ಬಿದ್ದು. ಅದನ್ನು ನನ್ನ ಕೈಯಿಂದಲೆ ಕುತ್ತಿಗೆ ಹಿಸಿಗಿ ಕೊಂದುಬಿಟ್ಟೆ. ಸತ್ತ ಕೂಸು ಅತ್ತಂತೆ ಕೇಳಿಸುವುದು....ನಾನೇ ಜೋಗುಳ ಹಾಡಿದಂತೆ ಕೇಳಿಸುವುದು ಆಗ....

**ಯಮ** :— ಅಯ್ಯಯ್ಯಾ! ಸಾಕು ಬಿಡವಮ್ಮಾ, ಸಾಕು! ಏನು ಅನ್ಯಾಯಯ್ಯಾ ಭೂಲೋಕದಲ್ಲಿ? 'ಕೆನ್ನೆಗೆ ಹೊಡೆದು ಅತ್ತರೆ ಏಟು' ಅಂದಂತಿದೆ ವ್ಯವಹಾರ!

(ದೂತರನ್ನು ಕುರಿತು) ಹೇಳ್ಳಿಲ್ವೇನಯ್ಯಾ ನಿಮಗೆ ಆಗಲೆ? ಇಂಥ ಕಂದಮ್ಮಗಳನ್ನು ತಂದು ನನ್ನ ಸೇಚನಲ್ಲಿ ಹಾಕ್ಬೇಡಿ ಅಂತ! ಬಿಟ್ಟು ಬಂದ್ಬಿಡಿ ಇವಳನ್ನ ಭೂಲೋಕದಲ್ಲಿ!

**ಲಾ** :— (ಅಂಗಲಾಚಿ) ಬೇಡ ಸ್ವಾಮಿ; ಬೇಕಾದರೆ ಗಲ್ಲಿಗೆ ಹಾಕಿರಿ, ಏನಾದರೂ ಶಿಕ್ಷೆ ಕೊಡಿರಿ. ಭೂಲೋಕಕ್ಕೆ ಮಾತ್ರ ಕಳಿಸಬೇಡ!

**ಯಮ** :— ನೀನೇಕಮ್ಮಾ ಇಷ್ಟು ಭಯಪಡ್ತೀ? ರಂಗನಾಥ ಅಲ್ಲಿಲ್ಲ!

**ಲಾ** :— ಬೇಡ ಒಡೆಯಾ! ಅವರಿಲ್ಲದಿದ್ದರೆ ಅವರಪ್ಪನಂತವರಿದ್ದಾರೆ ಅಲ್ಲಿ!

**ಯಮ**:— (ಮೈ ಮೈ ಪರಚಿಕೊಳ್ಳುತ್ತ) ಛೆಛೆಛೆ, (ದೂತರ ಕಡೆ ನೋಡಿ) ಒಂದು ಸಾವಿರ ಸಲ ಹೇಳಿದ್ದೇನೆ ನಿಮಗೆ: ಈ ಹೆಣ್ಮಕ್ಕಳ ತಂಟೆ ತರಬೇಡ್ರಯ್ಯಾ ಅಂತ! ಆ ಮಹರಾಯಳು ಸಾವಿತ್ರಿ ಆಗಲೆ ಒಮ್ಮೆ ಬುದ್ಧೀ ಕಲಿಸಿದ್ದಾಯಿತು. ಏನೋ, ಗಂಡನ ಜೀವಾ ಕೊಡು ಅಂತ ಸತಾಯಿಸಿದ್ಲು, ಕೊಟ್ಟುಬಿಟ್ಟೆ. ಪೀಡಾ ಬಗೆಹರೀತು. (ಲಾವಣ್ಯವನ್ನು ಕುರಿತು) ಏನಮ್ಮಾ ನಿನಗೂ ನಿನ್ನ ಗಂಡನ ಜೀವ ಕೊಟ್ಟರೆ ಭೂಲೋಕಕ್ಕೆ ಹೋಗ್ತೀಯೇನಮ್ಮಾ?

**ಲಾ**:— ಅವರಾರೋ ಸ್ವಾಮಿ, ಹೆಚ್ಚು ಪರಿಚಯ ಸಹ ಇಲ್ಲ! ಅವರನ್ನೇಕೆ ಕೊಂಡು ಹೋಗಲಿ, ನನ್ನೊಡೆಯಾ? ಇಲ್ಲೇ ಏನಾದರೂ ಕೆಲಸ ಮಾಡಿಕೊಂಡು ಇರೂ ಅಂದರೆ....

**ಯಮ**:— ಚೆನ್ನಾಗಿದೆ, ವ್ಯವಹಾರ! ಭೂಲೋಕದವರೆಲ್ಲ ಇಲ್ಲೇ ಇರ್ತೀನಿ ಅಂತ. ಏನಯ್ಯಾ! ಚಿತ್ರಗುಪ್ತರೇ, ಏನಿದಕ್ಕೆ ಉಪಾಯ?

**ಚಿ. ಗು**:— ನನ್ಗೇನೂ ತೋಚೋಲ್ಲ ಮಹಾಪ್ರಭೂ; ನೀವೇ ಹೇಳಬೇಕು!

**ಯಮ**:— ಭೇಷ್. ಇದಕ್ಕೇ ಅಯ್ಯಾ ಗುಮಾಸ್ತರನ್ನೆಲ್ಲ ಭೂಲೋಕದಲ್ಲಿ ಪ್ರಾಪರ್ಟಿ ಲಿಸ್ಟಿನಲ್ಲಿ ಸೇರಿಸಿದ್ದಾರೆ. ದೇವರು ನಿಮ್ಗೆ ತಲೀಕೊಡೋ ಬದಲು ಇನ್ನೆರಡು ಕೈಗಳನ್ನು ಕೊಟ್ಟಿದ್ರೆ ಚೆನ್ನಾಗಿರೋದು, ಬರೀತಾ ಕೂಡ್ಲಿಕ್ಕೆ! ಮೇಲಿನವರು ಹೇಳಿದ್ದಕ್ಕೆಲ್ಲ 'ಹೂಂ' ಅನ್ನುವ ನಿಮ್ಗಿಂತ 'ಉಹೂಂ' ಅಂದ ಲಾವಣ್ಯ ಮೇಲಯ್ಯಾ. ತೆಕ್ಕೊಂಡು ನಡೀರಿ ನಿಮ್ಮ ದಫ್ತರಾನ, ಆ ವಿಷ್ಣುವಿನ ಕೋರ್ಟಿಗೆ....ಆ ಕಂದಮ್ಮನನ್ನೂ ಕರಕೊಂಡು. ನಾನು ಕಾರಿನಲ್ಲಿ ಬರ್ತೀನೆ! ಒಳ್ಳೇ ಕೆಲಸ, ಭೂಲೋಕದ ಕತ್ತೆಗಳು ಮಾಡೋ ಅನ್ಯಾಯಕ್ಕೆ ನನ್ನ ಫಜೀತು. ಇನ್ನೆಲ್ಲಿ ಇನ್ನೆಲ್ಲೀ ನರ್ತನ? ಈ ತೊಡಕು ಬಿಡಿಸಿದರೆ ಸಾವಿರ ನರ್ತನ ನೋಡಿದಷ್ಟಾನಂದ ಆಗುತ್ತೆ. ಆ ಸಿರಿಯಪ್ಪನ್ನೂ ತನ್ನಿ, ಅವನ ಕೇಸೂ ಫೈನಲ್ಮಾಡಿಸೋಣ!

(ಎಲ್ಲರೂ ಹೋಗುವರು— ಇನ್ನೂ ವಾಪಸು ಬಂದಿಲ್ಲ.)

---

# ನಾನೇ ಸತ್ತಾಗ

## ಪಾತ್ರಗಳು

೧ ಬೀಚಿ (ಗಾಣದೆತ್ತಿನಂತೆ ದುಡಿಯುವ ಒಡೆಯ)
೨ ಗೋಪಿ (ಬೀಚಿಯ ತಮ್ಮ; ಹೊಸದಾಗಿ ಕಾಲೇಜು ಸೇರಿದವ)
೩ ರಘು (ಬೀಚಿಯ ಚಿಕ್ಕ ತಮ್ಮ)
೪ ಅವಳು (ಬೀಚಿಯ ಕೈ ಹಿಡಿದಾಕೆ)
೫ ಪದ್ದು (ಬೀಚಿಯ—ಮದುವೆಗಾದ ಮಗಳು)
೬ ಅತ್ತೆಯವರು ('ಅವಳ' ತಾಯಿ)
೭ ಅಮ್ಮ (ಬೀಚಿಯ ತಾಯಿ)
೮ ಆಚಾರ್ಯರು (ದೇವರ ಪೂಜೆಯ ಬ್ರಾಹ್ಮಣ)
೯ ತಾರವ್ವ (ಪಕ್ಕದ ಮನೆಯ ೫೦ ವರ್ಷದ ವಿಧವೆ)

## ಪ್ರಸ್ತಾವನೆ

ಬೀಚಿ :— (ರಂಗದ ಮೇಲೆ ಪ್ರವೇಶಿಸಿ)

'ಕೊಟ್ಟ ದೇವರು ಕೊಂಡು ಒಯ್ದರೆ
ಕುಟ್ಟಿಕೊಂಡು ಅಳುವುದ್ಯಾಕೋ?

ಎಂದು ಪುರಂದರ ದಾಸರೇನೋ ಹೇಳಿದ್ದಾರೆ...ಆಗಲಿ! ಇದು ಕೇವಲ ಅವರಂತಹ ರಿಟಾಯರ್ಡ್ ಪೆನ್ಶನರ್ಸ್‌ಗೇ ಹೊರತು, ನಮ್ಮಂತಹ ಲೌಕಿಕರಿಗೆ ಹೇಗೆ ತಾನೇ ಸಾಧ್ಯ ಅಂತ....; ಆಂ....ಅಲ್ಲ, ಇದೊಂದು ಹೊಸ ಯೋಚನೆಯು ತಲೆಯಲ್ಲಿ ತೂರಿದೆಯಲ್ಲ! ಯಾರೋ ಸತ್ತಾಗ ಯಾರೋ ಅಳುವುದನ್ನು ನೋಡಿದ್ದೆ, ಕೇಳಿದ್ದೆ. ಆದರೆ ಸ್ವತಃ ನಾನೇ ಸಾಕ್ಷಾತ್ ಸತ್ತಾಗ, ಯಾರು ಯಾರು ಹೇಗೆ ಹೇಗೆ ಅಳುತ್ತಾರೋ ನೋಡಬೇಕೂ ಅಂತ ಆಶೆ; ಆದರೆ ಇದು ಹೇಗೆ ಸಾಧ್ಯ....? ಸತ್ತ ಮೇಲೂ ಮನುಷ್ಯ

ಬದುಕಿದ್ದರೆ ಚೆನ್ನಾಗಿ ಇರೋದಲ್ವೆ?....(ಯೋಚಿಸಿ) ಆಂ! ಒಳ್ಳೆ ಉಪಾಯ. ಔಷಧಿಯ ಸೀಸೆಯನ್ನೂ, ಮೋಸಂಬಿ ಹಣ್ಣುಗಳನ್ನೂ ತೆಗೆದುಕೊಂಡು, ಜಟಕಾದಲ್ಲಿ ಮನೆಗೆ ಹೋಗಿ ಸತ್ತುಬಿಡ್ತೇನೆ: ನಿಜವಾಗಿ ಸಾಯುತ್ತೇನೆ.... ಮತ್ತೆ ನಿಜವಾಗಿ ಎಂದರೆ ನಿಜವಾಗಿಯೂ ನಿಜವಾಗಿ ಅಲ್ಲ; ಸುಳ್ಳು ಸುಳ್ಳೇ ನಿಜವಾಗಿ ಅಷ್ಟೆ!

(ಹೋಗುವನು)

## ಪ್ರಾರಂಭ

(ಬೀಚಿಯ ಮನೆಯ ಬಾಗಿಲ ಮುಂದೆ ಜಟಕಾ ನಿಲ್ಲುವುದು. ಎಲ್ಲರೂ ಬಂದು ಬೀಚಿಯನ್ನು ಇಳಿಸಿಗೊಳ್ಳುತ್ತಾರೆ. ಐದಾರು ಸಲ ಅಲ್ಲಲ್ಲಿ ಕುಳಿತು—ನಿಂತು—ಹಾಸಿಗೆಗೆ ಬರುತ್ತಾನೆ.)

**ಗೋಪಿ:**— (ಗಾಬರಿಯಿಂದ) ಏನಣ್ಣಾ?....ಏನಾಗಿದೆ ಅಣ್ಣಾ?

**ಬೀಚಿ:**— .... (ಮೋರೆ ಕಿವುಚಿ ಎದೆ ಮುಟ್ಟಿ ತೋರಿಸುತ್ತಾನೆ.)

**ಗೋಪಿ:**— ಮಾತಾಡಲು ಬರೋಲ್ವೇನಣ್ಣಾ?

**ಬೀಚಿ:**— ....(ಕೈ ತಿರುವುತ್ತಾನೆ. 'ಕಾಗದ ಮತ್ತು ಸೀಸಕಡ್ಡಿ ಕೊಡು' ಎಂದು ಸಂಜ್ಞೆ ಮಾಡುತ್ತಾನೆ. ಗೋಪಿ ತಂದುಕೊಡುವನು. "ಹಾರ್ಟ್ ಫೈಲ್ ಆಗಿದೆ" ಎಂದು ಎಡಗೈಯಿಂದ ಗೀಚುತ್ತಾನೆ.)

**ಗೋಪಿ:**— ಅಯ್ಯೋ! (ಎಂದವನೇ ಬೈಸಿಕಲ್ಲಿಗೆ ಓಡುತ್ತಾನೆ)

**ಅಮ್ಮ:**— ಏನೋ ಗೋಪೀ....ಏನೋ ಅದೂ? (ಹಿಂದೆ ಓಡುತ್ತಾಳೆ)

**ಗೋಪಿ:**— ಆಯಿತಮ್ಮ, ಅಣ್ಣಂದಾಯಿತು. ಡಾಕ್ಟರು........ (ಸೈಕಲ್ಲನ್ನು ಹತ್ತಿ ಹೋಗುತ್ತಾನೆ.)

**ಅಮ್ಮ:**— ಅಯ್ಯೋ! ಬೀಚಿ, ಏನಾಯಿತಪ್ಪಾ! (ಅಳುವಳು. ಎಲ್ಲರೂ ಬೀಚಿಯನ್ನು ಸುತ್ತುಗಟ್ಟುವರು. ಬೀಚಿ ಕರಿಯ ಗುಡ್ಡೆಗಳನ್ನು ಮೇಲೆ ಕಿದು, ಉಸಿರು ಬಿಗಿಹಿಡಿದು ಮಲಗುತ್ತಾನೆ, 'ಅವಳು' ಬಟ್ಟಲಲ್ಲಿ ಹಾಲನ್ನು ತಂದು ಬಾಯಲ್ಲಿ ಹಾಕುತ್ತಾಳೆ. ಬೀಚಿ ಎಲ್ಲವನ್ನೂ ಎಡಗಡೆಯ ಸೋಟಿಯಿಂದ ಉಗುಳುತ್ತಾನೆ.)

**ಅವಳು:**— ಅಯ್ಯೋ! ಗಂಟಲಲ್ಲಿ ಹಾಲು ಕೂಡ ಇಳಿಯಲೊಲ್ಲದಲ್ಲಾ! ಡಾಕ್ಟರು ಇನ್ನೂ ಬರಲಿಲ್ಲವೆ! (ಅಳುತ್ತಾಳೆ.)

**ಆಚಾರ್ಯರು.**— (ಮೂಗುಮುಟ್ಟಿ ನೋಡಿ) **ನಾರಾಯಣ.** ನಾರಾಯಣ....(ಕಾಲುಮಡಿಸಿ) ಹಾಸಿಗೆ ಬಿಡಿಸಿ ಭೂಶಯನಕ್ಕೆ ಹಾಕಿಬಿಡಿರಿ. ಪ್ರಾಯಶ್ಚಿತ್ತದ ದಾನಾ ಕೊಡಿಸೋದು ತೀವ್ರ ಕೊಡಿಸಿಬಿಡಿರಿ!

**ಬೀಚಿ:**— (ತನ್ನಲ್ಲಿಯೇ) ಡಾಕ್ಟರು ಬರೋದರೊಳಗೇ ಪ್ರಾಣ ವಾಗಿ ಸತ್ತೆ, ಬದುಕಿಕೊಂಡೆ. ಇನ್ನ ಸುರು ಆಯಿತು ನೋಡಿ, 'ನಾನೇ ಸತ್ತಾಗ'!

**ಅವಳು:**— ಅಯ್ಯೊ! ಹಯ್ಯೊ! ಹಯ್ಯೊ ದೇವರೇ—ಏನ್ಗತಿ ತಂದೆಪ್ಪಾ ದೇವರೇ— ನನ್ಗತಿ ಏನೊ?....ಗತಿ ಏನು....ನಂದೇನು ಗತೀ... ನನ್ನ ನಡುನೀರ್ನ್ಯಾಗ ಕೈಬಿಟ್ಟು ಹೋಗ್ತೀರಾ....ನನ್ಗೇನು ಹೇಳ್ತೀರಿ ...ಏನು ಹೇಳ್ತೀರಿ ನನಗ....! ತಿಂಗಳಾಗಲಿಲ್ಲ, ಬೇಡಾ ಬೇಡಾ ಅಂದ್ರೆ ವಜ್ರದ ಬೆಂಡೋಲೀ ತೆಕ್ಕೊಂಡ್ಬಂದಿರಿ. ಲಕ್ಷಣವಾಗಿ ಮುತ್ತೈದೀ ಬೆಂಡೋಲಿ ವತ್ತೀ ಇಡಬಾರದೂ ಅಂತ ಹೇಳಿದೆ ನಿಮ್ಗ....! ಗಲ್ಲಕ್ಕೆ ಹೇಳಿದ ಹಾಗೆ ಹೇಳಿದೆ, ನಿಮ್ಮ ಗಿಳೀ ಹಿಡಕೊಂಡು....! ಎರಕೊಳ್ಳಿಕ್ಕೇ ಅಂತ ಉಚ್ಚಿಟ್ಟ ಬೆಂಡೋಲಿ ಮತ್ತೆ ಇಟ್ಗೊಳ್ಳೇ ಇಲ್ಲ ನಾನು....! ಇದ್ದ ಒಂದು ಜತೀ ಬೆಂಡೋಲೀ ಒಯ್ದು ವಂದೀ ಮನ್ಯಾಗ ಇಟ್ಟು ಬಂದ್ರೀ....! ಯಾರು ಬಿಡಿಸಿ ಕೊಡ್ತಾರ ನನ್ಗೆ? ಅಯ್ಯೊ ದೇವ್ರೇ—ಸಾಯೋ ಕಾಲಕ್ಕೆ ಇವರಿಗೇಕೆ ಆ ದುರ್ಬುದ್ಧಿ ಕೊಟ್ಟೆಪ್ಪಾ?.. ನನ್ನ ಅಡವೀ ಪಾಲು ಮಾಡಿದ್ರೀ;.. ಮಕ್ಕಳ ಕೈಯಾಗ ಚಿಪ್ಪು ಕೊಟ್ರೀ.. ನೀವು ಮಕ್ಕಳ ಕೈಯಾಗ!.. ಅಯ್ಯೊ— ಮಕ್ಕಳನ್ನೆಲ್ಲಾ ಹುಟ್ಟಿದಾಗಲೆ ಕೊಂದಿದ್ರೆ ಚೆನ್ನಾಗಿರತಿತ್ತು— ಅಯ್ಯೊ—ಅಯ್ಯೊ.. ವಜ್ರದ....

**ಅತ್ತೆಯವರು:**— ಅಳಬೇಡವ್ವಾ, ಅಳಬೇಡಾ! ಯಾಕ ಅಳ್ತೀದಿ? ಅತ್ತರೇನು ಸತ್ತವರಿಗೆ ಕೇಳುತ್ತೇನು! ಯಾತಕ್ಕಳತೀ— ಮತ್ತೆ ತಲೆ ನೋಯುತ್ತವ್ವಾ.. ಅಳಬೇಡ; ಬಸುರು ಹೆಣ್ಣು ಮಗಳೂ— ಅಳಬೇಡ! ಹಣೇಬರಹಾ ಯಾರು ಅಳಿಸ್ತಾರೇ! ಹಣೇ ಕುಂಕುಮಾ ಅಳಿಸಿಹೋಗಿ ಬಿಟ್ಟ.. ನನ್ನ ಮಗಳನ್ನ ಪೂರ್ತೀ ಹಾಳುಮಾಡಿ ಹೋದ.. ಅನ್ಯಾಯ ಮಾಡಿ ಹೋದ.. ಇನ್ನೊಂದು ಮೂರು ವರ್ಷಾದರೂ ಬದುಕಿದ್ರೆ ಹುಡುಗರು ಕೈಗೆ ಬರುತಿದ್ರು— ಇನ್ಯಾಕ ಈ ಮನೀ ಆಶಾ

ನನಗೆ..! ದೀಪಾ ಇಳಿಸು, ಗ್ಲಾಸು ಸೀಳೀತು. ದೀಪಾ ಇಳಿಸು— ಪದ್ದೂ ಮದುವಿಗಾಗಿ ನಿಂತಿದೆ— ಅವಳ ಮದುವಿ ನಿನೇನು ಮಾಡ್ತೀಯವ್ಮಾ— ಆ ಇದ್ದ ಬೆಂಡೋಲೀನೂ ಒಯ್ದು ಹಾಳ್ಮಾಡಿಟ್ಟ...! ಈ ಗಚ್ಚಿನ ಮನಿ, ಈ ಅಂತಸ್ತಿನ ಮನೀ ನೋಡಿ ಕೊಟ್ನಿವ್ಮಾ ನಿನ್ನಾ!.. ಪ್ಯಾಸಾದ ಹುಡುಗ, ಎಲ್ಲಾದರೂ ದೊಡ್ಡ ಕೆಲಸಾದೀತೂ ಅಂತ ಕೊಟ್ನಿವ್ಮಾ ನಿನ್ನಾ!... ನೀನೂ ಒಬ್ಬ ಗೌರ್ನಮೆಂಟು ಅಧಿಕಾರಸ್ಥನ ಹೆಂಡ್ತಿ ಆಗಿ ಮೋಟಾರಿನಲ್ಲಿ ಓಡಾಡ್ತೀದೀ ಅಂತ ಕೊಟ್ನಿವ್ಮಾ ನಿನ್ನಾ.! ನನಗೆ ದುರ್ಮಾರ್ಗದ ಮಗ, ಸೊಸಿದೇ ಎಲ್ಲಾ ರಾಜ್ಯ. ಅನುವು ಆಪತ್ತಿಗೆ ಇರತದೆ ಅಂತ ಇವರ ಮನಿಗೆ ಕೊಟುಗೊಂಡ್ನಿವ್ಮಾ ನಿನ್ನ!... ಎಲ್ಲಾ-ರಿಗೂ ಕೈಯಲ್ಲಿ ಚಿಪ್ಪುಕೊಟ್ಟ..; ಈ ಮನೀ ನನಗೇನು ಸಮ್ಮಂಧ ಇನ್ನ. ನನಗ್ಯಾಕೆ ಬೇಕೂ— ಪದ್ದೂ! ಹಾಲೂ ಮೊಸರೂ ಬಿಡಿಸಿಡು, ಹಾಲೊಡೆ-ದಾವು, ಬಿಡಿಸಿಡವ್ಮಾ— ನಿನಗೆ ವರ್ಷದಿಂದ ಹೇಳ್ತಾ ಇದ್ದೆ: ನಿನ್ಗಂಡಗೆ ಹೇಳಿ ಅಣ್ಣ-ತಮ್ಮಂದಿರ ಪಾಲು ಮಾಡ್ಸಿಬಿಡೂ ಅಂತ!.. ದೇಹ ಶಾಶ್ವತ ಅಲ್ಲಾ, ಇವತ್ತಿದ್ದವರು ನಾಳೆ ಇಲ್ಲಾ ಅಂತ! 'ಸುಮ್ಮನೀರವ್ಮಾ ಹಾಗನ ಬ್ಯಾಡಾ ಅಂದಿ – ಬರೇ ಹೆಣ್ಣು ಹಡೆದು ಕೂತೀದಿ!.. ನಿನಗೆ ನಾಳೆ ಯಾರು ಪಾಲು ಕೊಡ್ತಾರೇ.. ಅಯ್ಯೋ, ಆಯ್ಯೋ, ಅಳಬ್ಯಾಡಾ.. ಹಯ್ಯೋ...!

**ಅವಳು**:— ಏನನ್ಯಾಯ ಮಾಡಿಬಿಟ್ರೊ.. ಭಾಳ ಅನ್ಯಾಯ ಮಾಡಿದ್ರೊ... ಎಲ್ಲಾ ಹಾಳುಮಾಡಿಬಿಟ್ರೊ! ಇನ್ನ ನನಗ್ಯಾಕೆ ಈ ಮನೀ— ಹಿತ್ತಲಬಾಗಿಲಾ ಹಾಕ್ರಿ, ನಾಯಿ ಬಂದಾವೂ.. ಹಿತ್ತಲಬಾಗಿಲಾ ಹಾಕ್ರೀ!.. ಹೊಲಕ್ಕೆ ಕಬ್ಬಿಣ ನೇಗಿಲಾ ಹೊಡಸ್ತೀನಿ ಅಂತ ಮನಿಗೇ ನೇಗಿಲಾ ಹೊಡಿಸಿಬಿಟ್ರೊ!... ಲಕ್ಷ್ಮೀ, 'ಲಕ್ಷ್ಮೀನ್ನ ಮಾರಬಾರ್ದು, ಅವ ಲಕ್ಷಣ' ಅಂದೆ!.. 'ಬೆಂಡೋಲೆ ಇಟುಗೊಂಬೋ ಹುಡ್ಗ್ರು ಒಂದಲ್ಲ ಮೂರು ಅವೆ, ಮದಿವಿಗಾದವಳ ಕಿವ್ಯಾಗಿನವು ಕಪ್ಪಾಗಿವೆ' ಅಂದೆ... ಅವಳಿ-ಗಿಡೋಣಾ ಅಂದೆ.. ಸಿಟ್ಟಾಗಿ ಒಪ್ಪತ್ತು ಊಟಾ ಬಿಟ್ರೆ... ಸಾಫ್‌ಸಾಫ್ ಬ್ಯಾಡಾ ಅಂದೆ.. ಬಾಯಿ ಮುಚ್ಚೂ ಅಂತ ಗದ್ದರಿಸಿ ಬಿಟ್ರ— ಪತ್ತೀ ಇಟ್ಟು ತಿಂಗಳಾಗಲಿಲ್ಲಾ, ನೀವೇ ಕಣ್ಮುಚ್ಚಿಬಿಟ್ರಿ..! ಇದರ ಕಾಲಾಗ್ಸ ನನ್ನರೀ ಎಂಟು ದಿವಸ ಮಾತು ಬಿಟ್ರೂ.. ಮಾತು ಬಿಟ್ಟವರು ತಿರಿಗಿ

ಮಾತೇ ಆಡಲಿಲ್ಲಾ-- ದೇವರು ಆಷಥಾಂಗೇ ಮಾಡಿಬಿಟ್ಟ. ಹಯ್ಯೋ...
ದೇವ್ರೆ!

**ರಾಘು:—** ಮೂರ್ಗಾಲೀ ಬೈಸ್ಕಲ್ಲಣ್ಣಾ!.. ಸಂಬಳ ಬಂದಮೇಲೆ ಮೂರ್ಗಾಲೀ ಬೈಸ್ಕಲ್ಲು ಕೊಡಿಸ್ತೀನಿ ಅಂತ ಹೇಳಿದ್ದೆಲ್ಲಾ ಅಣ್ಣಾ!.. ಯಾರು ಕೊಡಸ್ತಾರಣ್ಣಾ.. ನನಗೆ! ಮೂರ್ಗಾಲೀ ಬೈಸ್ಕಲ್ಲ ಮೇಲೆ ಕೂಡ್ಲಿಕ್ಕೆ ಬೇಕೂ ಅಂತ, ಕಾಕೀ ನಿಕ್ಕರು ಫೋರೀಟೋಪೀ ತಂದ್ಕೊಟ್ಟಿದ್ದೆಲ್ಲಣ್ಣಾ!.. ಅವನ್ನೆಲ್ಲಾ ಹಕ್ಕೊಂಡು ಬೈಸೀಕಲ್ಲು ಕೊಡಿಸೂ ಅಂತ ಯಾರನ್ನ ಕೇಳಲಣ್ಣಾ..!

**ಗೋಪಿ:—** ಅಳಬೇಡ ರಾಘೂ, ಅಳಬೇಡ—ಇನ್ನೆಲ್ಲೀ ಮೂರ್ಗಾಲೀ ಬೈಸಿಕಲ್ಲಪ್ಪಾ!— ನಮ್ಮನ್ಯಾರು ಕೇಳ್ತಾರಪ್ಪಾ ಇನ್ನ!— ಅಣ್ಣಾ ಇದ್ದಾಗ್ಲೇ ಅತ್ತಿಗಿ ನಮ್ಮ ಮ್ಯಾಲೆ ಕತ್ತೀ ಎಸೀತಾ ಇದ್ರೂ!.. ಹಬ್ಬಕ್ಕೆ ಬಟ್ಟೇ ನಮಗೆ ಹೊಲಿಸಿದ್ರೆ ಹೊಟ್ಟೆಬೇನೆ ಏಳುತಿತ್ತು, ಅವರಿಗೆ..! 'ಎಲ್ಲಾ ಅವರಿಗೇ ಮಾಡ್ತೀರಿ, ನನ್ನ ಮಕ್ಕಳಿಗೆ ಲುಂಗಾ ಕೂಡ ಇಲ್ಲ' ಅಂತಿದ್ರು..! ಇನ್ನೆಲ್ಲೀ ಬೈಸಿಕಲ್ಲಪ್ಪಾ ನಿನಗೆ?.. ನನ್ಗತೀ ಏನು ಮುಂದೆ? ಕಾಲೇಜ ಬಾಗಿಲ್ದಾಗೆ ನಿಂತ, ಬಿಕ್ಷೆ ಬೇಡ್ಲೇನು ನಾನು?.. ಯಾರು ಹೇಳಿದ್ರೂ ತಾಲ್ಲೂಕು ಕಚೇರಿಯೊಳಗೆ ಸೇರದೆ, ಹಟಾ ಹಿಡಿದು ಕಾಲೇಜಿಗೆ ಹೋದೆ.. ನಿನ್ನ ಮೇಲೆ ಭಾರಾ ಹಾಕಿ ನಾ ಹೋದ್ರೆ, ನನ್ನ ಮೇಲೆ ಭಾರಾ ಹಾಕಿ ನೀ ಹೋದಿ— ಇನ್ಯಾರು ನನಗೆ ಮೂರನೇ ತಾರೀಕಿಗೆ ಸರಿಯಾಗಿ ಮನಿಯಾರ್ಡರು ಕಳಿಸ್ತಾರೆ— 'ಭಾಳ ಕೃಷ್ಟ; ಹಣ ಬರದಿದ್ದರೆ ಭಾವೀ ಕೆರೀ ಪಾಲಾಗ್ತೀನಿ' ಅಂತ ಯಾರಿಗೆ ತಂತೀ ಕೊಡಲಣ್ಣಾ....

**ಪದ್ದೂ:—** ದೀಪಾವಳೀ ಬಸವನಾಟಕ್ಕೆ ಒಂದು ರೂಪಾಯಿ ಕೊಡ್ತೀನಿ ಅಂದಿದ್ದೆಲ್ಲಪಾ— ನನಗ್ಯಾರು ಕೊಡ್ತಾರಪಾ— ಯಾರನ್ನ ಕೇಳ್ಳೀ ನಾನೂ?..

**ಅವಳು:—** ಇನ್ಯಾರನ್ನ ಕೇಳ್ತೀ ಪದ್ದೂ— ಕೇಳು, ಇದ್ದಾರಲ್ಲಾ, ನಿಮ್ಮ ಕಕ್ಕ— ಎಷ್ಟು ದೇವರಿಗೆ ಹರಕೀ ಹೊತ್ತಿದ್ರೋ ಏನೊ— ಕಬ್ಬಿಣದ ಪೆಟ್ಟಿಗೀ ಬೀಗದ ಕೈ ಜನಿವಾರದಲ್ಲಿ ಬಿತ್ತು ಅವರಿಗೆ!.. ಅವರ ಮನಸಿನಂತೆ ಆಯ್ತು ಎಲ್ಲಾ!.. ಕೇಳು ಅವರ್ನ, ಗೋಪೀನಾಥರಾಯರನ್ನ

ಕೇಳು!.. ಕಾಲೇಜು ಕಾಲೇಜ ಅಂತ ಮನೀನೆ ಖಾಲಿಮಾಡಿದ್ರು—! ಒಂದು ಚೆಬ್ಬಾಮಾಡಿದ್ನೇ, ಹುಣ್ಣಿವೀ ಮಾಡಿದ್ನೇ—ರೊಕ್ಕ ಹಾಳೂ ಅಂತ ಗದರ್ಸಿ, ಎಲ್ಲ ರೊಕ್ಕಾ ಉಳಿಸಿ, ತಮ್ಮನ ಓದಿಗಿಟ್ರೇ – ನನ್ನ ತಮ್ಮನ ಮದಿವ್ಯಾಗ ಒಂದು ಸೆಲ್ಯಾ ಕೊಡೇಣಾ ಅಂವೆ; ಇಲ್ಲಾ ಅಂದರೆ ಇಲ್ಲಾ ಅಂದ್ರಿ ಈಗೇನು ನನ್ನ ಮಕ್ಕಳಿಗೆ? ಅದೇನೋ— ತಾಯಿ ಸತ್ತು ಸೋದರಮಾವ ಉಳೀಬೇಕಂತೆ, ತಂದೆ ಸತ್ತು ಕಕ್ಕಂದಿರು ಉಳೀಬೇಕಂತೆ— ಸುಳ್ಳೆಲ್ಲಾ ನೂ!— ಹಯ್ಯೋ.. ಈ ಸಂಸಾರದ್ದು ಇನ್ನ ನಂಗೇನು ಹತ್ತದೆ– ಇದು ಯಾಕೆ ಬೇಕು ನನಗಿನ್ನ?.. ಕೂಸಿನ ಕೈಯಾಗಿನ ಕಡ್ಡೀಪೆಟಿಗಿ ಇಸುಗೊಳ್ರೀ, ನೀರಾಗ ಹಾಕ್ಯಾಳು!.. ಈ ಕಿಡಿಗೇಡಿ ಮಕ್ಕಳು—ಕಕ್ಕಂದಿರ ಕೈಯಾಗ ಇವು ಹ್ಯಾಂಗೆ ಬದುಕ್ಯಾವೂ ಅಂತೀನಿ.. ಎಲ್ಲಾ ಇವರದೇ ಆಯ್ತಮ್ಮಾ, ನನ್ನ ಕೈಯಾಗ ಪರಟೀಕೊಡ್ತಾರಿವರು!.. ಅವರಿದ್ದಾಗೇ ಇಷ್ಟು ನಡಿಸಿಗೊಂಡವ್ರು, ಇನ್ನ ಬಿಡ್ತಾರೇನಮ್ಮಾ!.. ಅತ್ತಿಗೆ ಮುಪ್ಪು—ಮುಚ್ಚು.. ಎಲ್ಲಾ ಇವರದೇ ಇನ್ನ ಮೈದುನ ನಗೆಣ್ಣೀರಿಗೆ ದುಡಿಯಲಿಕ್ಕೆ ಹಿಡಿದಿ ಏನಮ್ಮಾ ನನ್ನ..! ತವರು ಸೇರಿದರೆ ನಾದಿನೀ ನಾಲಿಗೀಮ್ಯಾಲೆ ನಡೀಬೇಕು— ಊಟಕ್ಹೋತ್ರೆ 'ಎಷ್ಟು ಉಣ್ತೀರಲ್ಲಾ ವೈನೀ' ಅಂತಾರವರು ದೇವರೇ! ಇವರ ಕಣ್ಣು ಮುಚ್ಚ್ಯೋ- ಬದಲಿ....

**ಆಚಾರ್ಯರು**:— ಭೀಮರಾಯಾ, ಕರ್ಣನ ಕೈಯಲ್ಲಿಪಾ ನಿಂದೂ!— ಬ್ರಾಹ್ಮಣ್ರು ದೇವ್ರು ಅಂದ್ರೆ ಭಾಳಾ ಆಶ್ರಯ ಕೊಡ್ತಿದ್ದಿ! ಬೆಳ್ಳೀ ನಾಲ್ಕಾಣೆಗಿಂತಾ ಕಡಿಮಿ ದಕ್ಷಿಣೀ ಕೊಟ್ಟ ಕೈಯಲ್ಲಪಾ ನಿಂದು..! ಈಗಿನ ಕಾಲದಾಗ ಇಂಥಾ ಯೋಗ್ಯ ಆಸ್ತಿಕ ಸದ್ಗೃಹಸ್ಥರು ಎಲ್ಲಿ ಸಿಗ್ತಾರಪಾ ನಂಗೇ..? ಕೈ ಖರ್ಚಿಲೆ ಪುರಾಣ ಹೇಳ್ಸೀ, ಮನೀವೊಳಗೇ ಮಂಗಳಾ ಮಾಡಿಸ್ತೀ – ಭೀಮರಾಯಾ!.... ನನ್ನ್ಯಾರು ಪೂಜಿಗಿಟುಗೋತಾರ ಇನ್ನ? ಏನ್ರಮ್ಮಾ! ನನಗೆ ನಿಮ್ಮ ದೇವರ ಪೆಟಗಿ ಎರವಾಯ್ತು– ನನ್ನ ನಿಮ್ಮಾ ಋಣಾನುಬಂಧ ಕಡಿದುಹೋತು ಈವತ್ತೆ....

**ಆವಳು**: - ಆಚಾರ್ರೇ! ನಮ್ರನ್ಯಾಗ ಇಸ್ನ್ಯಾಕೆ ಇರ್ತೀರಿ ನೀವು: ಇಸ್ಯಾಕಿದ್ದೀರಿ..! ತೀರ್ಥಕೊಟ್ಟು, ಕೈಯಾಗ ದೇವರಮ್ಯಾಲಿನ ಹೂವು ಹಾಕ್ತಿದ್ರಿ..; ಅದೇ ಕೈಯಾಗೇ ಅಂಗಾರ ಹಚ್ಯಾಂಗ ಮಾಡಿದಾ ದೇವ್ರು.. ಅಯ್ಯೋ. ಮಾರಾಯ್ರ!

**ತಾರವ್ವ:—** ಏನಾಗಿತ್ರೀ ಪಾಪಾ! ಒಳ್ಳೆ ನಂಥಾ ಹುಡುಗಾ! ಕಂಡಾಗೆಲ್ಲಾ "ಊಟಾತೇನವ್ವಾ" ಅಂತಿದ್ದ. ರಾತ್ರೀ ನಮ್ಮನ್ನ ಹಾಂಗ ಕೇಳ್ತಾರದಪ್ಪಾ ಅಂತಿದ್ದೆ. ಭಂಗಾರದಂಥಾ ಹುಡುಗ..! ನಮ್ಮ ಯಜಮಾನ್ರು ಹೋಗಿ ಮೊನ್ನಿನ ನವರಾತ್ರೀ ಮುಂದಿನ ವರಷಿಗೆ ಇಪ್ಪತ್ತೇಳು ವರ್ಷಾದುವ್ರೂ—ಅಯ್ಯೋ!

**ಅಮ್ಮ:—** ಬೀಚೀ! ಬೀಚಣ್ಣಾ! ಹೋಗ್ತೀ ಏನಪಾ? ಹೋಗ..!.. ಇಷ್ಟಕ್ಕೇ ಈ ಪಾಪಿಷ್ಟಳ ಹೊಟ್ಟೀಲಿ ಹುಟ್ಟಿದೇನಪ್ಪಾ?.. ಏನು ಸುಖಬಟ್ಟಿ? ಈ ಅಷ್ಟದರಿದ್ರಳ ಹೊಟ್ಟೀಲಿ ಹುಟ್ಟಿ ಏನು ಸುಖಬಟ್ಟಿ? ಹೊತ್ತುಂಟ್ಲೆ ಆ ಮಾರಾಯರೂ ಕಣ್ಣು ಮುಚ್ಚಿದ್ರು.. ಕಂಡವರ ಬಾಗ್ಲಾಗೆ ನಿಂತು ವಾರದನ್ನ ಪಟ್ಟೀ ಸಂಬಳದ ಮ್ಯಾಲಿ ಮುಂದಕ್ಕೆ ಬಂದಿ.. ನಿನ್ನಷ್ಟಕ್ಕೆ ನೀನೇ ಕಷ್ಟ ಬಟ್ಟು ಕೆಲಸಾ ಸಂಪಾದಿಸಿಗೊಂಡಿ..! ಈಗ ಎಲ್ಲಾರೂ ಬಳಗಾ ಹಚ್ಚಿಗೊಂಡ್ರು— ದುಡಿದು ಆದರೂ ಸುಖಬಟ್ಯಾ? ಈ ನನ್ನ ಬಳಗಾ ಹಚ್ಚಿಕೊಂಡು ಬಡತನ ದುಬ್ಬಕ್ಕೆ ಕಟ್ಟಿಗೊಂಡಿ— ಬೀಚೀ! ಈ ಅಪಹಾತಳ ಹೊಟ್ಟೀಲಿ ಯಾಕೆ ಹುಟ್ಟಿದೆಪ್ಪಾ..? ಏನೋ, ದೇವ್ರು ದೊಡ್ಡ ಕಣ್ಣಲೆ ನೋಡಿದ್ದ—ಮುಂದಾದರೂ ಸುಖಬಡುತ್ತಿದ್ದ್ಯೋ ಏನೋ..! ನಿನ್ನಿಚ್ಚಿಗೆ ನೀನು ಒದಕಿರಬೇಕಾಗಿತ್ತು— ಬೀಚಣ್ಣಾ!.. ಬೀಚೀ.. ಅಯ್ಯೋ!

**ಬೀಚಿ:—** (ಬಿಮ್ಮೆಲೆ ಎದ್ದು) ಅವ್ವಾ! ನಿನಗಾಗಿಯೆ ನಾನು ಬದುಕಿರಬೇಕಂತವ್ವಾ! ದೇವರು ಪರಲೋಕದಿಂದ ವಾಪಸು ಕಳಿಸಿಬಿಟ್ಟ ನನ್ನ! (ನಮಸ್ಕರಿಸುವನು)



# ಏಕೀಕರಣ

## ಪಾತ್ರಗಳು

೧ **ಹಣಮಂತ ಕೋನ್ಹೇರ ದೇಸಾಯಿ** ( ಅಡ್ವೊಕೇಟ, ಗದಗ )
೨ **ಬಳ್ಳಾರಿ ನರಸಮ್ಮ** ( ದೇಸಾಯರ ತಾಯಿ-ತವರಮನೆ ಬಳ್ಳಾರಿ )
೩ **ಕೋಲಾರದ ವೆಂಕಟಲಕ್ಷ್ಮ** ( ದೇಸಾಯರ ಹೆಂಡತಿ )
೪ **ಕುಂದಾಪುರದ ಕೃಷ್ಣ** ( ಅನ್ನದಾತ-ಅಡಿಗೆ ಮಾಣಿ )
೫ **ಕೊಯತ್ತೂರು ರಹೋತ್ತರಾವು** ( ಅತಿಥಿ )

( ಸೂತ್ರಧಾರನ ಪ್ರವೇಶ )

**ಸೂತ್ರ**:— ಎಲ್ರಿಗೂ ನಮಸ್ಕಾರ, ಅಂದ್ರೆ ಏಕೀಕರಣ ಅನ್ನೋ ನಾಟಕಕ್ಕೆ ಉಪೋದ್ಘಾತ. ಆಸಿಯುಷ್ಟು ವಿಷಯಾನ್ನ ಇಂಬೆ ಅಷ್ಟು, ಮಾತಿನಲ್ಲಿ ಹೇಳಿ ನಾಟಕ ಪ್ರಾರಂಭ. ಸಂದರ್ಭ ಇಷ್ಟೇ: ಹಣಮಂತ ಕೋನ್ಹೇರ ದೇಸಾಯಿ, ಬಿ. ಎಸ್. ಸಿ., ಹೆಲ್ಬೆಲ್ಬಿ, ಅಡ್ವೊಕೇಟ, ಗದಗ, ಇವರ ಪಂಚಮ ಪತ್ನಿ ( ನಾಲ್ವರಿಗೆ ಮುತ್ತೈದಿ ಸಾವು) ಕೋಲಾರದ ವೆಂಕಟಲಕ್ಷ್ಮಮ್ಮ, ಮೈಸೂರು ಸೀಮೆಯವರು ಅಂತ ಬೇರೆ ಹೇಳಬೇಕೇ ! ಬಳ್ಳಾರಿ ನರಸಮ್ಮ—ತೌರುಮನೆ ಮಾತ್ರ ಬಳ್ಳಾರಿ—ದೇಸಾಯರ ತಾಯಿ, ಅರ್ಥಾತ್ ವೆಂಕಟಲಕ್ಷ್ಮ್ಮನ ಅತ್ತೆ, ಕುಂದಾಪುರದ ಕೃಷ್ಣ—ಅನ್ನದಾತ, ಮನೇಲಿ ಅಡಿಗೇ ಮಾಡೋ ಮಾಣಿ. ಕೊಯತ್ತೂರು ರಹೋತ್ತರಾವು—ಅತಿಥಿ. ಹೈದರಾಬಾದಿನಲ್ಲಿ ಜರುಗಲಿರುವ ಏಕೀಕರಣ ಪರಿಷತ್ತಿಗೆ ಇವರೆಲ್ಲರೂ ಹೋಗಲಿದ್ದಾರೆ. ಇವರೆಲ್ಲರೂ ಕನ್ನಡಿಗರೇ, ಎಲ್ಲರ ಮನೆ ಮಾತು ಕನ್ನಡವೇ. ಆದರೆ ಸ್ವಾರಸ್ಯ ಇಷ್ಟೆ, ಒಬ್ಬರ ಮಾತು ಮಾತ್ರ ಇನ್ನೊಬ್ಬರಿಗೆ ತಿಳಿಯುವುದಿಲ್ಲ. ನಮ್ಮ ಹಣಮಂತ ದೇಸಾಯರೆ ಏಕೀಕರಣ ಪರಿಷತ್ತಿಗೆ ಅಧ್ಯಕ್ಷರಾಗಿ ಚುನಾಯಿಸಲ್ಪಟ್ಟಿದ್ದಾರೆ. ಇವರು ಅಖಿಲ ಕರ್ನಾಟಕ ಆರ್ಯಸಂಘ, ಮಹಾಕಲಿ ಹನುಮದ್ಭೀಮ ವ್ಯಾಯಾಮಶಾಲ ಸಮಿತಿ, ಲೋನ್ ಅಂಡ ಸೇಲ್ ಸೊಸಾಯಿಟಿ, ಎಸ್. ಪಿ. ಸಿ. ಎ., ಕೆ. ಪಿ. ಸಿ. ಸಿ., ( ಒಮ್ಮೆ ), ಲ್ಯಾಂಡ ಮಾರ್ಟ್-

ಗೇಜ ಬಾಂಕು (ಇವತ್ತಿಗೂ) ಹ(ತ್ರಿ)ನುವೂನಸಿಥಿ, ವನಿ ಸರ್ಕಲೇ ಟ್ರಿಂಗ್ ವ್ಯೂಚಿಯಲ್ ಅನ್‌ಬ್ರೋಕನ್ ಅನ್ ಲಿಮಿಟೆಡ್ ಜ್ಯೆನು. ಟೆಂಪ ರೆನ್ಸ್ ಕಮಿಟಿ, ಸ್ಪೋರ್ಟ್ಸ್ ವೈನ್ ಸಿಂಡಿಕೇಟ, ಕೈವುಗ್ಗದವರ ಕ್ರೈತ್ರಿವು ಒಟ್ಟಿ ಸಂಘ, ವ್ಯಾಂಛೆಸ್ಟರ್ ಏಜಂಟ್ಸ್ ಅಸೆಂಬ್ಲಿ, ದೇ. ಭ. ರ ದಂಡು, ಬಾಯಲಿಸ್ಟ್ ಲೀಗ್, ಕುರುಬರ ಬ್ಯಾಂಕು, ಡಾಗ್‌ಷೋ ಕಮಿಟಿ, ಪ್ರಾಣಿ ದಯಾ ಪ್ರಚಾರಕ ಸಂಘ, ಹೈಡ್ ಅಂಡ್ ಸ್ಕಿನ್ ವ್ಯಾನುಫಾಕ್ಚರರ್ಸ್ ಎಂಡೋ ಮೆಂಟ್ ಬೋರ್ಡು, ಜಿಲ್ಲಾ ಬೋರ್ಡು, ತಾಲೂಕ ಬೋರ್ಡು, ವಿಲೇಜ ಬೋರ್ಡು, ವಾರ್ಡ್ ಬೋರ್ಡು, ಕಾರ್ಡ್ ಬೋರ್ಡು, ಬಾರ್ಬರ್ಸ್ ಯೂನಿಯನ್, ಸನಾತನಿಗಳ ವುಹಾಸಭೆ, ಹರಿಜನ ಹಿತವಾದಿ ವುಂಡಳಿ, ವಿಠಲಭಜನ ಮಂದಿರ, ದಿಗಂಬರ ಟೈಲರ್ಸ್ ಅಸೋಸಿಯೇಷನ್, ಶ್ರೀಮನ್ಮಧ್ವ ಸಿದ್ಧಾಂತಗ್ರಂಥ ಪ್ರಚಾರ ಸಮಿತಿ, ಇತ್ಯಾದಿ, ಇತ್ಯಾದಿಗಳಿಗೆ ಅಧ್ಯಕ್ಷರಾಗಿ ದ್ದವರು. ಇ ಅಂಡ್ ಓ ಇ ಅಂದರೆ ಅವಸರದಲ್ಲಿ ಯಾವುದಾದರೂ ಮರೆತಿದ್ರೆ ಕ್ಷಮಿಸಬೇಕೂ ಅಂತ ಅರ್ಥ. ಇನ್ನುಳಿದುವು, ಮಹಿಳಾ ಸಂಘ (ಕೋರಂ ಕಲಿಯುದಿದ್ದಕ್ಕಾಗಿ ಸಭೆ ಸೇರಿಲ್ಲ) ಮತ್ತು ವಿದ್ಯಾರಣ್ಯ ಚರಾಚರ ವಾಚನಾಲಯ (ಅಂಡರ್ ವಾಲಂಟರಿ ಲಿಕ್ವಿಡೇಷನ್) ಇನ್ನು ನಾಟಕ ಪ್ರಾರಂಭ.

## ದೃಶ್ಯ ೧

[ದೇಸಾಯರ ಮನೆ. ಮುಳುಗುವ ಸೂರ್ಯನ ಪ್ರಕಾಶಕ್ಕೆ ಮೂಣ ಅಕ್ಕಿ ಯಲ್ಲಿ ಹರಳನ್ನು ಆರಿಸುತ್ತಿದ್ದಾನೆ. ತುಳು ಹಾಡನ್ನು ಗೊಣಗುಟ್ಟುತ್ತಿದ್ದಾನೆ.

ದಾಯೆಗೋ ವಾಯೆದಮಗೆ ದಾಯೆಗೋ ॥ ಪ ॥
ದಾಯೆಗಿಂಬೆಮಗೆ ನ್ಯಾಯ ಪಣಂಡ ಬಗೆ
ಬಾಯಿ ದೆಪ್ಪರೆ ಇಜ್ಜ ತೂವರೆ ತೀರುಜಿ ॥ ಅ. ಪ ॥
ಇಂಬೈನೆ ಇಂಬ ಮಲ್ತಾಂಡ ನನದಾನೆ ಪಂಬೆರ್ ಊರ್ದು ರೇಕೊಂಡ
ಚಲ್‌ಸೀಲೊನೊಂತೆ ಬುಡುವನಾಂಡ ॥ ಅಹ ॥
ದೊಂಬಿದಾದವು ಪೇರ್ದ ಕಡ್ಯೊನು ದೆತ್ತಾಡ್ದೆ
ನಂಬ್ರುವೊ ಕೇನ್ಂಡ ಬಂಜಿಡ್ ತೂಲಕ್ಕುಂಡು ಕ್ಕುಲ ॥ ೧ ॥

ಸಸ ಪಿಂಜಿ ಸಂಗತಿ ಉಂಡು । ಪಣಾಯೆರೆ ಬಜಿ ನಾಟಕ್ಕೈವುಂಡು
ಎಸ ಮಗಲ್ ಬೋದರ್ ಮಿಂನಗ ‖ ಅಕ ‖
ನಿನಮಗೆ ಪಾರ್ ಬತ್ತಾ ತೊಟು ಪತ್ಯೆ ।
ಮನಸಗ್ ತೋಜಿಲೀಲೆನ್ ತೂಪಾಯಗೆ ಕಿಷ್ಟೆ ‖ ೨ ‖

ಈ ಅಕ್ಕಿನಲ್ಲಿ ಕಲ್ಲು ಎಂಥದು ಮಾರಾಯ್ರೆ ಹೆಕ್ಕಿ ತೆಗೆಯೋದು ? ಇದರಲ್ಲಿ ಅಕ್ಕಿ ತೆಗೆಯೋದು ಮೇಲಲ್ವ? ಈ ಜನಕ್ಕೆ ಅಡಿಗೆ ಮಾಡಿ ಬಡಿಸೋದು ನನ್ನ-ನನ್ನ ಕೈಯಿಂದ ಎಂದೂ ಆಗಲಿಕ್ಕಿಲ್ಲ. ಈ ಅಜ್ಜಿ ಈ ರಾಯರ ಕಾಟಕ್ಕೆ ಬೇರೆ ಯಾವ ಜನ ಈ ಮನೇಲಿ ಒಂದು ಗಂಟೆ ಸಹ ಇರಲಿಕ್ಕಿಲ್ಲ. ನಾನು ಅಮ್ಮನಿಗೆ ಹೇಳಿ ತಂಗಿ ಮದುವೆಗೆ ಹೋಗಿ ಹಾಗೆ ಊರಲ್ಲಿ ನಿಂತುಬಿಡುವ ಅಂತ ನೆನಸಿದ್ದು. ಮಾತಿಮಾತಿಗೆ ದಮ್ಮಯ್ಯ ಹಾಕಿ ಇಲ್ಲಿರೋದು ನನ್ನ ಕೈಯಿಂದಾಗುತ್ತ ? ಬೇಡ ಮಾರಾಯ್ರೆ. ನನಗೆ ಆಗಲಿಕ್ಕಿಲ್ಲ. ಇಲ್ಲಿ ನನಗೆ ಸುಖ ಉಂಟು ಎಂಥದು? ಬೆಳಗ್ಗೆ ಒಂದು ಗಂಜಿ ಊಟ ಮಾಡಿ ಆಯ್ತು. ಮತ್ತೆ ಮೂರು ಗಂಟೆಗೆ ಊಟ ಮಾರಾಯ್ರೆ ಬೇಡ, ಈ ಜನರ ಬಾಯಿಂದ ಮಾತು ಆದರೂ ಒಳ್ಳೆದುಂಟಾ? ಪಿರಿ ಪಿರಿ, ಪಿರಿ ಪಿರಿ, ಇಡೀ ದಿವಸ ಪಿರಿ ಪಿರಿ. ಇವರ ಬಾಸೆ ನನಗೆ ಏನೊಂದು ಗೊತ್ತಾಗಲಿಕ್ಕಿಲ್ಲ. ಅದು ಕನ್ನಡವೋ! ಇವರ ಬಾಸೆ ಬೇಡ, ಇವರ ದೇಶ ಬೇಡ, ಇವರ ತಿಳಿ ಬೇಡ. ನಾ ಊರಿಗೆ ಹೋಗಿ ಬಿಡುತ್ತೆ. ( ಅಕ್ಕಿಯ ಕಡೆ ನೋಡಿ ) ಈ ಹಾಳು ಅಕ್ಕಿ ಬೇರೆ. ಇದರಿಂದ ಅನ್ನ ಮಾಡೋದು ಎಂಥದು? ನನಗೇನು ತೋರೋಲ್ಲ. ಒಂದಲ್ಲ ಮಾರಾಯ್ರೆ, ಮೂರು ಜನ ಉಂಟು, ನನ್ನ ಮೇಲೆ ಸವಾರೀರು ಮಾಡೋದು.

**ನರ :—** ( ಬಾಗಿಲಲ್ಲಿ ) ಕ್ರಿಷ್ಟ್ಯ, ಕ್ರಿಷ್ಟ್ಯ, ( ಗಟ್ಟಿಯಾಗಿ ) ಏ, ಕ್ರಿಷ್ಟ್ಯ.

**ಮಾಣಿ :—** (ಒಳಗಿನಿಂದ) ಬಂದೆ ಅಜ್ಜೀ, ಬಂದೆ.

**ನರ :—** ಬಾಗಿಲ ಯಾಕ ಬಂದು ಮಾಡೀಯೋ ? ಬಾಗಿಲ ತಗಿ ಏ, ಕ್ರಿಷ್ಟ್ಯ.

**ಮಾಣಿ:—** (ಕೋಪದಿಂದ) ಈ ಜನಕ್ಕೆ ಪ್ರಾಣ ಹೋಗುತ್ತ ? ಅದೆಂಥದು ಅಷ್ಟು ಅವಸರ ಮಾಡೋದು ? ಕೈಲಿ ಕೆಲಸ ಉಂಟಲ್ಲ.

**ನರ:**— ಏ ಕ್ರಿಷ್ಟ್ಯಾ, ಕಿವೀನರ ಕೇಳ್ತ್ಯೊ ಇಲ್ಲೊ? ಬಾಗಿಲ ಬಂದು ಮಾಡಿ ಏನು ನಡಿಸೀದಿ ಒಳಗ? ಏ ಕಿಷ್ಟ್ಯಾ.

**ಮಾಣಿ:**— ಬಂದೆ ಅಜ್ಜ (ಬಾಗಿಲನ್ನು ತೆಗೆಯುವನು)

**ನರ:**— (ಕೈಯಲ್ಲಿ ಬತ್ತಿಯು ಬುಟ್ಟಿ, ಮಾಣಿಯನ್ನು ಮರಮರನೆ ನೋಡುತ್ತ ಪ್ರವೇಶಿಸಿ) ಬಾಗಿಲ ತಗಿಲಿಕ್ಕೆ ನಿನಗ ತಾಸು ಹತ್ತೇನು? ಏನು ಕಾರಭಾರ ನಡಿಸಿದ್ದಿ ಒಳಗ?

**ಮಾಣಿ:**— ಭಾರ ಎಂಥದು ಮರಾಯ್ರೆ ನಡಸೋದು? ನನಗೆ ಗೊತ್ತೆ ಭಾರ?

**ನರ:**— ಹಂಗಾರs ಬಾಗಲ ತಗೀಲಿಕ್ಕೆ ಯಾಕ ಅರ್ಧಘಂಟಿ ಹತ್ತ್ಯೋ ನಿನಗ?

**ಮಾಣಿ:**— ಗಂಟೆ ಹತ್ತೋದು ಎಂಥದು? ದೇವರ ಕಟ್ಟೆಮೇಲಿನ ಗಂಟೆ ನನಗೆ ಗೊತ್ತುಂಟ?

**ನರ:**— ನಿನ್ನ ತಲಿ. ಬಾಗಿಲಯಾಕ ತಗಿಲಿಲ್ಲ ನಾ ಕೂಗ್ತಾನ ಅಂದೆ. ಕೂಗಿ ಕೂಗಿ ಗಂಟ್ಲ ಹರಕೊಂಡ್ನೆಲ್ಲಾ ನಾವು ಘಂಟೇದ ಹೊತ್ತು.

**ಮಾಣಿ:**— ಹೌದಾ? ನನಗೆ ಇಲ್ಲಿ ಕೆಲಸ ಇಲ್ಲಾ? ನನ್ನ ಕೈ ಕಡಲಿ ತಿನ್ತಿದ್ದು ಹೇಳಿ ನೆನಸಿದ್ದ ನೀವು?

**ನರ:**— ಹಾ, ಹಂಗ್ಹೇಳು. ಒಳಗಿನ ಕಡ್ಲೀಗ ಮಕಾ ಹತ್ತೀದ್ಯಾ ನೀನು. ಕಡ್ಲೀಗ ಕಡ್ಲೀನ ಬಾದು, ಚುರುಮುರೀಗ ಚುರುಮುರೀನ ಬಾದು? ಹಿಂಗಾರ ಮನಿ ಮುಂದಾತು (ಮಾಣಿಯ ಬಾಯಿಯನ್ನು ನೋಡಿ) ಏನೋ ಅದು ಬಾಯಾಗs, ಕುರಿ ಆಡಿದ್ಹಂಗ ನಮುಲು ಹಾಕ್ತಾನ ಇದ್ದೀಯಲ್ಲ, ಏನದು?

**ಮಾಣಿ:**— ಇದು ಒಳ್ಳೆ ಅನುಮಾನ ಜನ ಮಾರಾಯ್ರೆ. ನನ್ನ ಬಾಯಲ್ಲಿ ಉಂಟು ಎಂಥದು? ಅಜ್ಜಿಗೆ ಈಗ ಒಂದು ತಮಾಷೆ ಮಾಡುವ. (ತಿನ್ನುವಂತೆ ನಟಿಸುತ್ತನು)

**ನರ:**— ತಗೀತಿಯೊ ಇಲ್ಲೋ ಬಾಯಿ. ಈ ಮಗನ ಫಾಳಿಕೀಗೆ ಆ ನೊಸಿ ಧುಂದುಗಾರಿಕೆ ಒಂದು ನಾಲ್ಡೀ? ನೀನು ಬ್ಯಾರೆ ಒಳಗೇ ಹೆಗ್ಗಣ

ನೋಡ್ದ್ಹಂಗ ಮೋಯಿತೀಯಾ? ತಗಿ ಬಾಯಿ. (ಹತ್ತಿರ ಹೋಗುತ್ತ) ತಗೀ ತೀಯೋ ಇಲ್ಲೊ (ಮೂಗು ಹಿಡಿಯುವಳು)

**ಮಾಣಿ:**—(ಆ ಎಂದು ಬಾಯಿ ತೆಗೆದು) ನಾಲಿಗಿ ಅಜ್ಜ ನಾಲಿಗಿ ತಿನ್ತಾ ಇದ್ದದ್ದು. ತಿನ್ನೋದು ಎಂಥದು ಈ ಮನೇಲಿ? ಉಪ್ಪಿಗೆ ಕೂಡ ಬೀಗ ಮುದ್ರೆ, ಬೀಗದ ಕೈ ರಾಯರ ಜನಿವಾರದಲ್ಲಿ, ರಾಯರ ಜನಿವಾರ ಅಮ್ಮ ಅವರ ಕೈಯಲ್ಲಿ. ನಾನು ತಿನ್ನೊದು ಎಂಥದು ಉಂಟು, ಬುರ್ನಾಸು.

**ನರ:**— ತಲಿ ಕೆಟ್ಟು ಮಾತಾಡ್ಲಿಕ್ಕೆ ಹತ್ಯಾನ ಇವ. ಇವನ ಸರಿ ಯಾಗು ಮಾತಾಡ್ತಾರು. ಇರಲಿ ಹೋಗೋ, ಯಾಕ ಸನ್ನಿ ಬಡದವರ್ಹ್ಹಂಗ ಬಡಬಡಸ್ತಿ. ಹೋಗು, ದೀಪ ಹಚ್ಚೋಗು. ಹಿಂಗ ಕತ್ಲ ಮಾಡಿಡ ಬಾರ್ದು ಮನೀನ, ಅವಲಕ್ಷಣ ಲಕ್ಷ್ಮೀದೇವಿ ಬರೊ ಹೊತ್ತು.

**ಮಾಣಿ:**— ಅವರು ಕ್ಲಬ್ಬಿಗೆ ಹೋಗಾಯ್ತಲ್ಲ. ಅವರು ಬರಲಿಕ್ಕೆ ಇನ್ನ ತುಂಬ ಹೊತ್ತುಂಟು. ಇಷ್ಟು ಬೇಗ ಅಮ್ಮ ಎಂದಾದರೂ ಬಂದದ್ದು ಉಂಟ?

**ನರ:**— ಇವಗೇನು ಖರೇ ಹುಚ್ಚು ಹಿಡಿತೇ ಹೆಂಗ? ಮೂರೋ ಸಂಜಿ ಹೊತ್ತು. ದೀಗೀ ಮುಟ್ಟಿಸೋ ಅಂದ್ರೆ ಅಮ್ಮ ಕ್ಲಬ್ಬು ಅಂತ ಹಚ್ಯಾನಲ್ಲ ಇವ. ಯಾರೋ ನೀ ಅನ್ನೋದು?

**ಮಾಣಿ:**— ಅಮ್ಮ ಅಂದರೆ ಬೇರೆ ಇನ್ನೊಂದು ಜನ ಉಂಟ ಮಾರೆಯ್ರಿ ಈ ಮನೇಲಿ? ಅಮ್ಮ, ವೆಂಕಟಲಕ್ಷಮ್ಮ, ನಿಮ್ಮ ಸೊಸೆ ಕ್ಲಬ್ಬಿಗೆ ಹೋಗಿಲ್ವಾ?

**ನರ:**— ಕ್ಲಬ್ಬಿಗೆ ಹೋಗಿರೋ ಆ ಮಡ್ಡಮ್ಮನ ಸುದ್ದೀಗ ನಾನ್ಯಾಕೆ ಹೋಗಲಿ? ಆಕಿ ಹಂಗ (ವೆಂಕಟಲಕ್ಷ್ಮಮ್ಮ ಪ್ರವೇಶಿಸಿ ಕೇಳುತ್ತ ನಿಂತಿರುವಳು) ಬೆಂದ ಮನಿ ಯಾವುದು, ಬೆಯ್ದ ಮನಿ ಯಾವುದು ಅಂತ ಲುಂಗ ಉಟು ಗೊಂಡು ತಿರಗತಾನ ಇಲ್ಲಿ. ಆ ದೊರೆಸಾನಿ ಬರ್ತಾಳೆ ಅಂತ ದೀಪ ಹಚ್ಚಿ ಇಡಸ್ಲೇನು ನಾನು? ಆಕಿ ನೋಡಿದ್ರೆ ಒಂದತ್ತಿನ್ನ ನೋಡ್ತ್ಯಾಳೆ. ಇಂಥಾ ನಾಲ್ಕು ಸೊಸೇರು ನನ ಕೈಯಾಗ ಉರುದು ಹೋದ್ರು. ಆ ಮಂಗಾ ಹಣುಮ್ಯಾ ಒಂದು ಮಂಗ್ಯಾನ್ಹ್ಹಂಗ ಆಕಿ ಮುಂದ ಕುಣಿತದ ಅಂತ ಬಿಟ್ಟೇನಿ ಇಲ್ಲ. ಅಂದ್ರೆ ಪಂಚರ ಹೊಂಡದಿಂದ ಡುಬ್ಬ ಕೆತ್ತು ಹಂಗ ನೀರು ಹೊರಲಿಕ್ಕೆ

ಎಂದೋ ಹಚ್ತಿದ್ದೆ. ಏನಂದುಕೊಂಡಾಳೋ ಬಳ್ಳಾರಿ ನರಸಮ್ಮ ಅಂದರ. ಇರಲಿ ಹೋಗೋ, ನೀನು ಮದಲು ದೀಪ ಮುಟ್ಟಿಸು.

**ಮಾಣಿ**:— ದೀಪ ಮುಟ್ಟಿಸೋದು ಎಂಥದು ಮಾರಾಯ್ರೆ, ಯಾಗೆ ಮುಟ್ಟಿಸೋದು ?

**ನರ**:— (ಕೋಪದಿಂದ) ಹೋಗ್ತೀದೋ ಇಲ್ಲೋ (ಹೊಡೆಯಲು ಹೋಗುವಳು)

**ಮಾಣಿ** :— ಆದೀತು ಮಾರಾಯ್ರೆ (ಒಳಗೆ ಓಡುವನು)

**ನರ** :— (ಜನದ ಕಡೆ ತಿರಿಗಿ) ಏನು ಛಲೋ ಪುರಾಣ ಹೇಳ್ತಾರಂ ಅಂದ್ರೆ ವಾಹಿನಿ ಆಚಾರ್ರು! ಆ ಯುದ್ಧ ಖಾಂಡಂತೂ ಕೇಳಿದ್ಹಂಗೆಲ್ಲ ಮೈತುಂಬಿದ್ಹಂಗಾಗ್ತದ ಹಂಗ.

**ವೆ. ಲ**:— (ಕೈಯಲ್ಲಿ ಛತ್ರಿ, ಜಂಬದ ಚೀಲದೊಂದಿಗೆ ಪ್ರವೇಶಿಸಿ) ಕ್ರಿಷ್ಣಾ, ಏ ಕ್ರಿಷ್ಣಾ.

**ಮಾಣಿ**:— (ಒಳಗಿನಿಂದ) ಬಂದೆ, ಬಂದೆ ಅಮ್ಮ.

**ವೆ. ಲ**:— ಬಾರೋ ಬೇಗ.

**ಮಾಣಿ**:— ಇಗೋ, ಬಂದೆ ಅಮ್ಮ.

**ವೆ. ಲ**:— ಕೇಳಲ್ವೇನೋ ಕಿರಿಚಿಗೊಳ್ತಾ ಇರೋದು? ಬಾರೋ ಬೇಗ.

**ಮಾಣಿ**:— ಬಂದ್ಬಿಟ್ಟೆ ಅಮ್ಮ, ದೀಪ ಹಚ್ತಾಯಿತ್ತು, ಬಂದೆ. (ಬಂದು) ಎಂಥಾದ್ದುಮಾರಾಯ್ರೆ. ನೀವು ಕರೆದದ್ದು ?

**ವೆ. ಲ**:— ನಾನು ಇಲ್ಲಿ ಕೂಗ್ತಾ ಇದ್ರೆ ಏನೋ ನೀನಲ್ಲಿ ಮಾಡ್ತಾ ಇದ್ದದ್ದು?

**ಮಾಣಿ**:— ನಾನು ಮಾಡಿದ್ದು ಉಂಟು ಏನಲ್ಲಿ? ದೀಪ ಹಚ್ಚಿ ಬಂದದ್ದು.

**ವೆ. ಲ**:— ಯಾರೊ ನಿನಗೆ ದೀಪ ಮುಟ್ಟಸಲಿಕ್ಕೆ ಹೇಳಿದ್ದು ?

ಗ **ಮಾಣಿ**:— ಅಜ್ಜ ಹೇಳಲಿಲ್ವ ?

ನರ:— ಹೌದಪ್ಪ, ನಾನ್ಹೇಳ್ದೆ ಜವಗೆ ದೀವಿಗಿ ಹಚ್ಚು ಅಂತ.

ವೆ. ಲ:— ಈಗ ನಾನು ಹೇಳ್ತೇನೆ ಹೋಗು, ಅದನ್ನ ನಂದಿಸಿ ಬಾ. ಹೂ, ಬೇಗ.

ನರ:— ಕ್ರಿಷ್ಟ್ಯಾ, ಸುಕ್ರವಾರ ಮೂರೋಸಂಜಿ ಹೊತ್ತು, ಹಚ್ಚಿದ್ದ ದೀಪಾನ ನಂದಿಸ್ತೀಯಾ? ನಿನ ಚವರ್ಗಾನ ಸುಲಿಸ್ತೀನಿ, ಅವ ಹಣವು ಒಂದು ಮನಿಗೆ ಬರ್ಲಿ.

ವೆ. ಲ:— ಯಾಂಗೋ ಕ್ರಿಷ್ಣ ನಾನು ಹೇಳ್ತಾ, ಇರೋದು? ದೀಪ ನಂದಿಸು ಅಂತ ನಾನು ಹೇಳ್ತಾ ಇದ್ರೂನೂವೆ ಕಲ್ಲು ನಿಂತ ಹಾಗೆ ನಿಲ್ತೀಯಾ. ಅವರು ಬರ್ಲಿ ನಿಲ್ಲು, ನಿನಗೆ ನೇಣು ಹಾಕಿಸ್ತೇನೆ, ನೇಣು.

ಮಾಣಿ:— ಈಗ ನಾನು ಮಾಡೋದು ಎಂಥದು ಮಾರಾಯ್ರೆ? ದಮ್ಮಯ್ಯ. ಪಿರಿ ಪಿರಿ ಜನ.

ವೆ. ಲ:— ಹೋಗೋ ಬೇಗ, ದೀಪ ನಂದಿಸೋ.

ನರ:— ಕ್ರಿಷ್ಟ್ಯಾ, ಹುಷಾರ್.

ಮಾಣಿ:— ದೀಪ ಹಚ್ಚಿ ನಿಮ್ಮ ಮಾತು ಕೇಳಿ ಆಯ್ತಲ್ಲ. ಇನ್ನು ಅದನ್ನು ತೆಗೆದು ಅಮ್ಮನ ಮಾತು ಕೇಳೋದು. ಮತ್ತೆ ಮಾಡೊದು ಎಂಥದು ಬೇರೆ! (ದೀಪವನ್ನು ಆರಿಸಿಬಂದು) ಆರಿಸಾಯ್ತು ಮಾರಾಯ್ರೆ.

ವೆ ಲ:— ನಂದಿಸಾಯ್ತೆ? ಹೂ, ಹೋಗು ಈಗ ದೀಪ ಹಚ್ಚಿಡು.

ಮಾಣಿ:— ಇದು ಎಂಥದು ಮಾರಾಯ್ರೆ, ಉರಿತ ಇದ್ದ ದೀಪ ಆರಿಸಿದ್ದು ಏಕೆ, ಮತ್ತೆ ಹಚ್ಚೋದಕ್ಕೆ?

ವೆ. ಲ:— ನಿನಗೇಕೋ ಅದೆಲ್ಲ ಅಧಿಕಪ್ರಸಂಗ? ಹೇಳಿದಷ್ಟು ಮಾಡು ಅಂತ ಹೇಳ್ಳಿಲ್ವಾ. ಹೋಗೋ ಬೇಗೆ, ದೀಪ ಹಚ್ಚು.

ಮಾಣಿ:— ಆದೀತು ಮಾರಾಯ್ರೆ, ನೀವು ನನ್ನ ಮೇಲೆ ಕೋಪ ಮಾಡೋದು ಬೇಡ. ಈ ಕತ್ತಲಲ್ಲಿ ಬೆಂಕಿಪೆಟ್ಟಿಗೆ ಹುಡುಕೋದಾ?

ನರ:— ಏ ಕ್ರಿಷ್ಟ್ಯಾ ದೀವಿಗಿ ಹಚ್ಚಬ್ಯಾಡ. ಹಚ್ಚು ಅಂದಾಗ ಹಚ್ಚಲಿಕ್ಕೆ, ಆರಿಸು ಅಂದಾಗ ಆರಿಸಲಿಕ್ಕೆ ಇವೇನು ಗೌಡನ ಕ್ವಾಳ ಆತೇನು?

ಸಾಪ ಸಾಪ ಹಚ್ಚ್ಯಾಡ. ಹಚ್ಚದಿ ಅಂದ್ರ ಹಣಿವ್ಯಾ ಬಂದ ಮ್ಯಾಲೆ ನಿನ್ನ ಖಶೀನ ಮಾಡಿಸ್ತೇನಿ ನೋಡು.

**ವೆ. ಲ:—** ಹಚ್ಚದೆ ಬಂದಿರು. ಅವರು ಬಂದ ಮೇಲೆ ಚೆನ್ನಾಗಿ ಮದುವೆ ಆಗತ್ತೆ.

**ಮಾಣಿ:—** ದಮ್ಮಯ್ಯ ಮಾರಾಯ್ರೆ, ಅಜ್ಜ ಮಾಡಿಸೊ ಖತಿ ಎಂಥದು, ನೀವು ಮಾಡಿಸೊ ಮದುವೆ ಎಂಥದು? ನನಗೆ ಈ ಗೌಜಿ ಬೇಡ ಈ ಪಿರಿ ಪಿರಿ, ಯಾರಿಗೆ ತಾನೆ ತಲೆ ಸಮ ಇರುತ್ತ? ನೀವು ನನ್ನ ಮೇಲೆ ಬೀಳೋದು ಬೇಡ. ನನಗೂ ಮನೇಲಿ ತಾಯಿ ತಂಗಿ ಉಂಟು. ನಾನು ನನ್ನ ಸಾಮಾನು ಕಟ್ಟಿ ಊರಿಗೆ ಹೊರಟೆ. ಇದು ಎಂಥದು ಮಾರಾಯ್ರೆ ದೀಪ ಹಚ್ಚಿದರೆ ಮೂಳೆ ಮುರಿದೀತು, ಬಿಟ್ಟರೆ ತಲೆ ಒಡದೀತು. ಬೇಡ, ನನ್ನ ಬಟ್ಟೆಗಂಟು ಕಟ್ಟಿ ನಾ ಹೋತೆ. (ಒಳಗೆ ಹೋಗುವನು)

**ವೆ. ಲ:—** ಏಳ್ರೂಪಾಯದ ಒಬ್ಬ ಅಡಿಗೆಹುಡುಗ ಕೂಡ ನನ್ನ ಮಾತು ಕೇಳೋಲ್ಲ ಅಂದ್ರೆ ನಾನೇಕೆ ಈ ಮನೇಲಿರಬೇಕೋ ನಾ ಬೇರೆ ಕಾಣೆ. ಕೋಲಾರದ ವೆಂಕಟಸುಬ್ಬರಾಯರ ಮಗಳು ವೆಂಕಟಲಕ್ಷ್ಮಮ್ಮ ಅಂದ್ರೆ ಅಷ್ಟೊಂದು ಕೆಟ್ಟು ಬಂದ್ಳು ಅಂತ ತಿಳಿದಿದ್ದಾರೇನೋ! ಈ ಮನೇಲಿ ಇನ್ನೊಂದು ನಿಮಿಷಾನೂ ಇರೋಲ್ಲ.

**ನರ:—** ಯಾಕ ಇರೋದಿಲ್ಲವ್ವ, ಇರು. ಕಂಕಣದ ಕೈಯಾಕಿನ್ನ ಆರಿಸಿ ತಂದಾನ, ಅಗತ್ಯ ಇರು. ದೇಸಾಯರ ಮನಿ ನಷ್ಟ ಸಂತತಿ ಆಗ್ಬಾರ್ದು, ಮನೀಗ ದೀಪ ಹಚ್ಚೋ ಲಕ್ಷ್ಮಿ ಅಂತ ಹುಡಿಹುಡಿಕಿ ತಂದಾನ. ಅದಕ್ಕ ಸುಕ್ರವಾರ, ಮೂರೋ ಸಂಜಿ ಹೊತ್ತು ಹಚ್ಚಿದ ದೀಪ ಆರಿಸಿದೆವ್ವ. ದೀಪ ಹಚ್ಚೊ ಲಕ್ಷ್ಮಿನ್ನ ಮಾಡಿಕೊಳ್ಳೋ ಮಂಗಮುಂಡೇ ಮಗನೆ,— ಅಲ್ಲ ಗಂಡ. ಅಂದ್ರೆ ದೀಪ ಆರಿಸೋ ಮಾರೆವ್ವನ ತಂದಾನ ಮನ್ಯಾಗ.

**ವೆ. ಲ:—** ಬಾಯಿ ಮುಚ್ಕೊಂಡು ತೆಪ್ಪಗೆ ಇರೋಕಾಗದಿದ್ರೆ ನಾನು ಮನೆ ಬಿಟ್ಟು ಹೋಗೋ ವರೆಗೂ ಹೊರಗೆ ಹೋಗಿ ಜಗುಲಿ ಮೇಲಾದರೂ ಕುಳಿತುಗೊಳ್ಳಿ.

**ನರ:—** ಯಾರನ್ನs ಗಯ್ಯಾಳಿ, ಮನಿ ಬಿಟ್ಟು ಹೋಗು ಅಂತೀದಿ? ನನಗs ನನಗs ಹೀಂಗ ಅಂತೀಯಾ? ಇವತ್ತು ಬಂದ ಕೋಡು ನಿನ್ನೆ ಬಂದ ಕಿವಿ ಮುಂದೆ ಅಂತ ನನ್ನs ಹೊರಗ ಹಾಕ್ತೀಯಾ?

**ವೆ. ಲ:**— ನಿಮ್ಮ ಕಂತೆ ಪುರಾಣಯೆಲ್ಲ ನನ್ನ ಮುಂದೆ ಬಿಚ್ಚಬೇಡಿ ಅಂದ್ರೆ. ಬಹಳ ನೋಡಿದ್ದೇನೆ ಇಂಥೋರ್‍ನ. ಯಾರಿಗೆ ನೀವು ಮಾರೆವ್ವ ಅನ್ನೋದು?

**ನರ:**— ಹೌದೇ ಅಂತೀನಿ, ಮಾರೆವ್ವ, ಮಾರೆವ್ವ, ಮಾರೆವ್ವ—ಇನ್ನೂ ಹತ್ತುಬ್ಯಾರೆ ಅಂತೀನಿ.

**ವೆ. ಲ:**— ಇಲ್ಲಿ ನೋಡಿ, ನನ್ನ ತಂದೆ ತಾಯೀಗೆ ನಾನೊಬ್ಬಳು ಭಾರವಾಗಿರಲಿಲ್ಲ ತಿಳೀತೇ. ಅವರ ಮಗಳು ಇಂಥಾ ದರಿದ್ರರ ಮನೇಲಿರ ಬೇಕಾಗುತ್ತೆ ಅಂತ ತಿಳಿದಿದ್ರೆ ಅವರು ನನ್ನನ್ನು ಕೊಳದಲ್ಲಾದ್ರೂ ದೂಡಿ ಬಿಡ್ತಾ ಇದ್ರು. ನಾನು ಸಾಯೋವರೆಗೂ ಅವರ ಮನೇಲಿದ್ರೂನೂವೆ ಅವರೇನು ಬೇಡ ಅನ್ನೋಲ್ಲ ಮುದೀ ಗಂಡನ್ನ ಮಾಡ್ಕೊಂಡು ಸ್ನೇಹಿತ ರಲ್ಲಿ ಈಗ ಆಗಿರೋ ಅಪಹಾಸ್ಯ ಸಾಕು ಸಧ್ಯ, ಇನ್ನೂ ಪೂರ್ತಿ ಮಾನ ಹೋಗೋದು ಬೇಡ. ಈಗಲೆ ಹೊರಟೆ ನಾನು. ನನಗೇಕೆ ಬೇಕು ಈ ಹಂಗಿನ ಮನೆ? ಕ್ರಿಷ್ಣಾ ಕ್ರಿಷ್ಣಾ, ಇವನೂ ಸಹ ಮಾತಾಡೋಲ್ಲ. ನನ್ನ ಸಾಮಾನುಗಳನ್ನೆಲ್ಲ ನಾನೇ ಪ್ಯಾಕ್ ಮಾಡ್ಬಿಟ್ಟು ಹೊರಟ್ಬಿಡ್ತೀನೆ. (ಕತ್ತಲಲ್ಲಿಯೇ ಕೈ ಸವರುತ್ತ ಸೂಟ್‌ಕೇಸಿಗೆ ಸಾಮಾನುಗಳನ್ನು ತುಂಬುವಳು.)

**ನರ:**— ನೀನ್ಯಾಕ ಹೋಗ್ತೀಯವ್ವ ಮನಿ ಬಿಟ್ಟು? ನಾನೇ ಹೋಗ್ತೀನಿ, ನೀನೇ ಇರು. ನಾನು ಆಗಲೆ ಕುಯ್ಯೋ ಮುರ್‍ರೋ ಅಂದೆ. ಇವರು ಪಾಲಾಗೋ ಮುಂದೆ ನನಗ ಗೊತ್ತಿತ್ತು— ನೀನು ಹೇಳಿ ಕೇಳಿ ಮೈಸೂರು ಗಯ್ಯಾಳಿ. ನನ್ನ ಹುರಿಕೊಂಡು ಮುಕ್ಕಿ ಅರಕೊಂಡು ಕುಡಿತಿ ಅಂತ. ಅದಕ್ಕs ನಾನು ವಲ್ಲೋ, ಸಾಪು ಸಾಪು ವಲ್ಲೆ, ಈ ಹಿರೇಮಗ ಧಡ್ಡ ಖೋಡಿ, ಎಂಥಾ ಉನ್ನತ್ತ ಆದರೂ ಚಿಕ್ಕವನೇ ವಾಸಿ ಅಂದೆ. ಮುಪ್ಪಿನ ಕಾಲಕ್ಕ ನಮ್ಮನ್ನೂ-ಗಂಡಹೆಣ್ತಿನ್ನೂ- ಅಗಲಿಸಿ (ಅಳುವ ದನಿಯಲ್ಲಿ) ಉಲ್ಲಿಗೆ ಹಾಕ್ತೀರಾ. ಆಗತ್ಯ ಇರವ್ವ, ನೀನೇ ಇರು, ಇಗೋ ನಾನು ಹೊರಟೆ.

(ಒಂದು ತಂಬಿಗೆ ಸೀರೆ ಕೈಯಲ್ಲಿ ಹಿಡಿದು ಹೊರಡಲನುವಾಗುವಳು.)

**ಮಾಣಿ:**— (ಅಡಿಗೆಸೌಟು, ಅಂಗವಸ್ತ್ರ ಗೋಣಿಪಟ್ಟಿಯಲ್ಲಿ ಸುತ್ತಿ ಕಂಕುಳಲ್ಲಿಟ್ಟು) ಈ ಮನೆಗೆ ನಾನು ಇನ್ನೊಂದು ಸಲ ಎಂದಾದರೂ ಬರೋದಾ ಉಂಟಾ? ಅನ್ನ ಇಲ್ಲದೆ ಪ್ರಾಣ ಹೋದರೂ ಸಿವ ಈ ಮನೆ ಬೇಡ ಮಾರಾಯ್ರೆ.

( ಮೂವರೂ ಹೊರಡಲು ಅನುವಾಗುವರು. )

**ಹಣ** :— (ಪ್ರವೇಶಿಸಿ) ಅಪ್ಪಾ, ಏ ಅಪ್ಪ, ಇದೇನು ದಿವಿಗಿ ಹಚ್ಚ ಧಾಂಗ ಕತ್ಲದಾಗ ಇದ್ದೀರೋ ಏನ್ಗತಿ?

**ನರ**:— ಹಚ್ಚಿಸಿಗೊಳ್ಳಪಾ ದೀವಿಗೀನ. ಅಗತ್ಯ ಹಚ್ಚಿಸಿಗೋ. ಮನಿ ದೀಪ ಹಚ್ಚಾಲಿ ಅಂತ ಮೂವತ್ತು ಗಾವುದದಿಂದ ತಂದೀದಿ ನಂಭಿನ್ನ, ಸುಕ್ಕರವಾರ ಮೂರೋಸಂಜಿ ಆರಸಬಾರ್ದು ಅಪಶಕುನ ಅಂದ್ರೆ, ಆರಿಸಿದ್ನು. (ಅಳುವ ದನಿಯಲ್ಲಿ) ಮೂರು ಸರ್ತಿ ಬದರಿ ಯಾತ್ರಿ ಮಾಡಿ ಬಂದ ನನಗ ಆಡಬಾರದ ಮಾತುಗಳು ಆಡಿದ್ಲಪಾ ಹಣಿಮ್ಯಾ ನಿನ ಹೇಣ್ತಿ. ಆಕೀನ್ಗ ಅಗತ್ಯ ಮನಾಗಿರ್ಲಿ. ನಾ ಹೊಂಟೆ.

**ಹಣ** :— (ಅಡ್ಡಗಟ್ಟಿ ತುಸು ತಡಿಯುವಾ ಹಿಂಗ್ಯಾಕ ಒಂದೇಸವನೆ ಒಡಕೊಳ್ಳಿಕ್ಹತ್ತೀದಿ? ಆದ್ದಾರ ಏನು ಆತೂ? ಮೊದಲು ದೀವಿಗಿ ಹಚ್ಚಲಿಲಾ. ಆ ಕ್ರಿಷ್ಟ್ಯಾ, ಎಲ್ಹೋದ ಅವ? ಕಿಷ್ಟ್ಯಾ, ಕ್ರಿಷ್ಟ್ಯಾ, ಏ ಕ್ರಿಷ್ಟ್ಯಾ.

**ಮಾಣಿ** :— ನೀವು ಏನಾದರೂ ಹೇಳಿ ಮಾರಾಯ್ರೆ, ಆದೀತು ನಾನು ದಮ್ಮಯ್ಯ ಹಾಕ್ತೆ ನನ್ನ ಬಿಟ್ಟುಬಿಡಿ. ನನಗೆ ಮಾತ್ರ ಈ ಮನೇಲಿ ಇರಲಿಕ್ಕೆ ಹೇಳೋದು ಬೇಡ. ನಾನು ಖಂಡಿತ ಊರಿಗೆ ಹೋಗೋದು ಮಾರಾಯ್ರೆ.

**ಹಣ** :— (ಅಡ್ಡನಿಂತು) ಎಲಾ ಇವನ, ಇವಗೂ ಏನು ಬಂತು ಅಂತೀನಿ. ಹಿಂಗ್ಯಾಕ ಬಂತು ಪ್ರಸಂಗ? ಆದ್ದಾರ ಏನಾತು? ಅದನಾರ ಬಾಯಿಬಿಡಲಾ.

**ವೆ. ಲ** :— (ಕೋಪದಿಂದ) ಇಲ್ಲಿ ಬನ್ನಿ ಇಲ್ಲೆ

**ಹಣ** :— (ಚಕಿತನಾಗಿ) ಅರೆ, ನೀನು ಸುದ್ಧಾ ಇಲ್ಲೆ ಕತ್ಲದಾಗ !

**ವೆ. ಲ** :— ಇಲ್ಲೆ ಬನ್ನಿ ಅಂತ್ರೆ.

ಹಣ: – ಬಂದೆ, ಬಂದೆ ಲಗೂನ ಬಂದೆ. (ಹೋಗಿ ಮುಂದೆ ನಿಂತು) ಏನದೂ?

**ನರ** :— (ಜನದ ಕಡೆ ತಿರುಗಿ) ಹೋಗಪ್ಪ, ಓಡಿಕೋತ ಹೋಗು. ಅದೇನು ಅಂತ್ರಾನ್ಗ ಬರಿಸ್ಯಾಳೋ, ಬೂದೀನ್ಹ ಹಾಕಿಶ್ಯಾಳೋ, ಸಾಯಿತಾನ ಆಕಿ ಧನಿ ಕೇಳಿದರ. ಕುಣಿ ಹೋಗು ಆಕಿ ಮುಂದ ತಕ ತಕ ಅಂತ.

ವೆ. ಲ :— ಹೂ, ತೆಗೆದುಕೊಳ್ಳಿ ( ಕೈಯಲ್ಲಿ ಬುಟ್ಟಿ ಕೊಡುವಳು ) ಇದನ್ನು ತೆಗೆದುಕೊಳ್ಳಿ (ಸೂಟ್ ಕೇಸನ್ನು ಕಂಕುಳಲ್ಲಿಟ್ಟುಗೊಳ್ಳುವನು) ಇದೊಂದು ತಕ್ಕೊಳ್ಳಿ ( ದೊಡ್ಡ ಹಾರನ್ನುಳ್ಳ ಗ್ರಾಮಫ್ರೋನು ಪೆಟ್ಟಿಗೆಯನ್ನು ತಲೆಯ ಮೇಲೆ ಇಡುವಳು. )

ಹಣ :— ಏನೇ ಇದೆಲ್ಲ ?

ವೆ. ಲ : — (ದರ್ಪದಿಂದ ಹೂ, ಹೊರಡಿ ಸುಮ್ಮನೆ ಅಂದ್ರೆ

ಹಣ :— ಎಲ್ಲೀಗೆ ಹೊರಡೋದು ?

ನರ :— (ಹಣೆ ಬಡೆದುಕೊಳ್ಳುತ್ತ) ಅಯ್ಯೊ, ಅಯ್ಯೊ, ಅಯ್ಯೊ ಏನು ಬಂತೋ ಹಣೆಬ್ಯಾ ನಿನಗೆ? ಆರಿಸಿ ಮಾಡಿಕೊಂಡಿ ಅಲ್ಲೊ ಈ ಮಾರೆವ್ವನ್ನ

ವೆ. ಲ :— ಅಗೋ ನೋಡಿ, ನಿಮ್ಮ ತಾಯಿಗೆ ಬಾಯಿ ಮುಚ್ಚಿಗೊಂಡು ಬಿದ್ದಿರೋಕೆ ಹೇಳಿ ಮೊದಲು. ನನ್ನ ತಂದೆ ತಾಯಿ ಸರಿ ಸಹ ನಾನು ಅನಿಸಿಗೊಂಡವಳಲ್ಲ. ಇಲ್ಲಿ ಬಂದು ಈ ಮುದಿಗೂಬೆ ಸರಿ ಅನಿಸಿಗೊಳ್ಳೋದಾಯ್ತು. ನನ್ನ ಗಿಳೀ ಸಾಕಿದ ಹಾಗೆ ಸಾಕಿ ನನ್ತಂದೆ ತಾಯಿ ಈ ಬೆಕ್ಕಿನ ಬಾಯಲ್ಲಿ ಕೊಟ್ರು.

ಹಣ :— ಹೌದೇ, ಅದಿರ್ಲಿ. ಈ ಸಾಮಾನೆಲ್ಲ ಏಕೆ ತಲೆಮ್ಯಾಲಿಟ್ಟೆ?

ವೆ. ಲ :— ಹೂ, ಹೊರಡಿ ಅಂದ್ರೆ.

ಹಣ :— ಎಲ್ಲಿಗೇ ನೀ ಹೊರಟು ನಿಂತಿರೋದಾದ್ರೂ, ಅದನಾರ ಹೇಳಲ ಒಂದಿಷ್ಟು.

ವೆ. ಲ :— ನಿಮಗೇಕೆ ಅದೆಲ್ಲ ಅಧಿಕಪ್ರಸಂಗ? ಹೊರಡಿ ಅಂದ್ರೆ ಹೊರಡಿ ಅಷ್ಟೆ. ನಾನಂತೂ ಈ ಮನೇಲಿ ನಿಂತು ನೀರು ಸಹ ಕುಡಿಯೋಲ್ಲ.

ಹಣ :— ಹಂಗs ಮಾಡವಲ್ಯಾಕೇ, ಇದೇನ್ನಡಿಸೀದಿ ಕತ್ಲದಾಗ? ಹೊರಡೂದಾದರೂ ಎಲ್ಲಿಗೆ ಹೇಳಲಾ.

ವೆ. ಲ :— ಇನ್ನೆಲ್ಲಿಗೆ, ರೇಲ್ವೆ ಸ್ಟೇಷನ್ನಿಗೆ.

ಹಣ : — ರೈಲ್ವೆ ಸ್ಟೇಶನ್ನಿಗೆ! ಯಾಕs? ಹಿಂಗ್ಯಾಕಬ ವ್ಯಾಲೆ! ಛೆಛೇ, ಹಿಂಗ್ಯಾಕ ಮಾಡ್ಲಿಕ್ಕೆ ಹತ್ತೀರಿ ಮೂರೂ ಮಂದೀನೂ ಇವತ್ತು? ( ಸಾಮಾನುಗಳನ್ನು ಒಂದೊಂದಾಗಿ ಕೆಳಗಿಡುವನು )

ವೆ. ಲ :— ಹಾಗಾದ್ರೆ ನೀವು ಇವನ್ನು ತರೋಲ್ಲ ತಾನೆ? ನಾನು ಷ್ಟೇಷನ್ನಿಗೆ ಹೋಗ್ತೇನೆ.

ಹಣ :— (ಅಡ್ಡಗಟ್ಟಿ) ಹ್ಯಾ ಹ್ಯಾ, ನಿಂದ್ರು ಮಾರಾಯಳೇ, ಹಿಂಗ್ಯಾಕ ಒಂದುಸವನ ದೊಡ್ಡಾಟಾನ ನಡಿಸೀದಿ?

ವೆ. ಲ :— ನನಗೆ ರಸ್ತೆ ಬಿಡಿ ಅಂದ್ರೆ; ನಾನೀ ಮನೇಲಿರೋದಿಲ್ಲ.

ನರ :— ಹಾದೀ ತಗಿಯುವ ಹಣಿವ್ಯಾ, ಸರ್ವಸರ್ವಥಾ ಈ ಮನಾಗಿರಲಾರೆ

ಮಾಣಿ :— ನನಗೆ ಈಗ ಊರಿಗೆ ಹೋಗೋದು ಉಂಟು ಮಾರಾಯ್ರೆ. ನಿಮಗೆ ದಮ್ಮಯ್ಯ ಹೇಳ್ತೆ. ನನಗೆ ಹೊರಗೆ ಬಿಡಿ.

(ಮೂವರೂ ಸಾಲಾಗಿ ನಿಲ್ಲುವರು.)

ರಘು :— (ಬಾಗಿಲಲ್ಲಿ) ರಾಯ್ರೇ, ರಾಯ್ರೇ.

ಹಣ :— (ಚಕಿತನಾಗಿ) ಅಯ್ಯೋ! ಯಾರೋ ಕಕ್ಷಿದಾರ್ರು! (ಅಂಗಲಾಚಿ ಬೇಡುವಂತೆ) ಹೋಗ್ರಿ ಮಹರಾಯ್ರೆ ಒಳಗs ಮೂರೂ ಮಂದೀನು. ಒಳಗ ಹೋಗ್ರಿ ದಯಮಾಡಿ. ಕಕ್ಷಿದಾರ್ರ ಮುಂದೆ ಸುದ್ದಾ ನನ ಮರ್ಯಾದಿ ಕಾಸಿಗೆ ಪಂಥೇರು ಮಾಡಬ್ಯಾಡ್ರಿ.

ರಘು :— ರಾಯ್ರೇ, ರಾಯ್ರೇ.

ಹಣ :— ಬಂದೆ, ಬಂದೆ. ದಯಮಾಡಿ ಹೋಗ್ರಿ ಒಳಗ, ನಿಮಗೆ ಕೈಮುಗದು, ಕಾಲು ಬಿದ್ದು, ಗಲ್ಲ ಗಲ್ಲ ಬಡಕೊಂಡು ಘಂಟೇ ಹೊಡಿಶೀನಿ ಬೇಕಾದ್ರ. ಹೋಗ್ರಿ ದಯಮಾಡಿ ಒಳಗೆ. ಈಗ ಬಾಳ್ಯ ಆಗಿರೋ ಹಂಡಾವರ್ಣಾನ ಸಾಕು. ದಯಮಾಡಿ ಹೋಗ್ರಿ (ಉದ್ದಕ್ಯಾ ಮಲಗಿ ಮೂವ್ವರಿಗೂ ನಮಸ್ಕರಿಸುವನು.)

ರಘು :— ರಾಯ್ರೇ, ರಾಯ್ರೇ!

ಹಣ :— (ನಮಸ್ಕರಿಸುತ್ತ) ಬಂದೆ, ಬಂದೆ. ಹೋಗ್ರಿ ದಯಮಾಡಿ ಒಳಗೆ (ಎಲ್ಲರೂ ಒಳಗೆ ಹೋಗುವರು) (ಅಧಿಕಾರವಾಣಿಯಿಂದ) ಕ್ರಿಷ್ಟ್ಯಾ, ಕ್ರಿಷ್ಟ್ಯಾ, ದೀವಿಗಿ ಹಚ್ಚಿಡಲಾ.

**ಮಾಣಿ** :— (ದೀಪದೊಂದಿಗೆ ಬಂದು) ಈ ಮನೆ ಕೆಲಸ ನನಗೆ ತಪ್ಪುತ್ತ? ನನ್ನ ಹಣೇಲಿ ಬರಿಲಿಲ್ಲ ಬ್ರಹ್ಮ.

**ಹಣ** :— ಒಳಗ ಕರಿಯುಲ, ಕಕ್ಷಿದಾರ್ರನ್ನ (ಒಳಗೆ ಹೋಗುವನು.)

**ಮಾಣಿ** :— ಆದೀತು ಮಾರಾಯ್ರೆ (ಬಾಗಿಲನ್ನು ತೆಗೆದು ನೋಡಿ) ಆ ಜನ ಕಕ್ಷಿದಾರ ಉಂಟ? ನನಗೆ ಹಾಗೆ ತೋರೋಲ್ಲ. ತಲೆ ಮೇಲೆ ರುಮಾಲು ಬೇಡವಾ?

**ವೆ. ಲ** :— ಅಯ್ಯೊ, ಇವಕ್ಕೆ ನಿನಗೆ ಬೆಪ್ಪು ತಕ್ಕಡಿ ಅನ್ನೋದು ಕಕ್ಷಿದಾರ್ರನ್ನು ಒಳಗೆ ಕರಿಯದೆ ರಸ್ತೆಯಲ್ಲಿ ನಿಲ್ಲಿಸೇನೋ ಮಾತನಾಡೋದು?

**ಮಾಣಿ** :— ನನಗೆ ಗೊತ್ತುಂಟೆ ರಾಯರ ಕಾನೂನೆಲ್ಲ? ರುಮಾಲು ಜನ ಬಂದದ್ದಕ್ಕೆ ಕಕ್ಷಿದಾರ ಎಂದು ಹೇಳಿದ್ದು ಸಮ ಗೊತ್ತುಂಟು. ಆದೀತು. ನೀವು ನನ್ನ ಮೇಲೆ ಕೋಪ ಮಾಡೋದು ಬೇಡ (ವೆಂಕಟಲಕ್ಷ್ಮಿ ಒಳಗೆ ಹೋಗುವಳು.) (ರಘೂತ್ತಮ ರಾಯನ ಪ್ರವೇಶ) ಹೌದಾ. ನೀವು ಕಕ್ಷಿ ದಾರ ಹೌದಾ ಮಾರಾಯ್ರೆ?

**ರಘು** :— ನಂದು ಊರು ಕೊಯತ್ತೂರು. ಊರು ಬಿಟ್ಟು ಮೂರು ಮಾಸ ಆಯ್ತು. ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ ಫಂಡರ ಪುರಕ್ಕೆ ಹೋಯಿಟ್ಟಿಟ್ಟು ಕಾಲೀಲೆ ಟ್ರೈನ್ ಬರೋಣ ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ ಮೂರು ಹಗಲು ಮೂರು ರಾತ್ರಿ ಅತು ಕೂಳುಂಡು.

**ಮಾಣಿ** :— (ದಿಗ್ಭ್ರಾಂತನಾಗಿ) ಅಮ್ಮ, ಈ ಜನ ಆಡೋ ಬಾಸೆ ಎಂಥದು ಮಾರಾಯ್ರೆ! ದಮ್ಮಯ್ಯ ನಂಗೆ ಬೇಡ ಇದೆಂಥದು 'ಕೂಳುಂಡು' ಅಂತ ಹೇಳುತ್ತೆ ಈ ಜನ.

**ವೆ. ಲ** :— (ಪ್ರವೇಶಿಸಿ) ಏನೋ ಕ್ರಿಷ್ಣಾ, ಬಾಗಿಲಲ್ಲಿ ನಿಲ್ಲಿಸಿಯೇ ಚರ್ಚೆ ಮಾಡೋದು? ಬನ್ನಿ ಸ್ವಾಮಿ ಒಳಗೆ, ಕುಳಿತುಕೊಳ್ಳಿ. ಈಗ ತಾನೆ ಒಳಗೆ ಹೋಗಿದಾರೆ. ಬರ್ತಾರೆ ಕುಳಿತುಗೊಳ್ಳಿ. ಏನು ಕೇಸು ಕೊಡ ಬೇಕಾಗಿದೆಯೆ? ಕುಳಿತುಗೊಳ್ಳಿ (ರಘೂತ್ತಮರಾಯನು ಕೂಡುವನು) ಯಾವ ಊರು ತಮ್ಮದು?

ರಘು :— ನನ್ನ ಸ್ವಸ್ಥಾನ ಕೊಯತ್ತೂರು ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ, ಸೇಲತಲೆ, ಕುಂಭಕೋಣ ತಲೆ ಯಲ್ಲ ತುಂಭ ಜನ ನನ್ನ ವರಿರೋಣ. ನಾನು ತುಂಭ ದಿನ ಆಯ್ತು ಕೊಯತ್ತೂರು ಬಿಟ್ಟಿಟು.

ವೆ ಲ:— ಸ್ವಲ್ಪ ತಾಳಿ ತಾಳಿ, ಅವರನ್ನೆ ಕರೀತೇನೆ. ಕೇಸಿನ ವಿಷಯು ಅವರಿಗೆ ತಾನೆ ಹೇಳಿ. ಏನ್ರೀ, ಅಲ್ಲ ಇವರೇ. ಇಲ್ಲಿ ಬನ್ನಿ ಅಂದ್ರೆ, ಬಂದ್ರಾತ್ರ್ಯ.

ರಘು : — (ಎದ್ದು ಮುಂದೆ ಬಂದು) ಭಾಳ ಯೋಗ್ಯ ಹೆಣ್ಮಗಳ್ಹಾಂಗ ಕಾಣ್ತಾಳೆ. ಇದು ಈಗ ಯಾಕೆ ಹೇಳೋಕೆ ಬಾತಂತಂದ್ರೆ, ತುಂಭ ಒಳ್ಳೆ ಹೆಣ್ಮಗಳು ಬಂದವರ ಸರಿ ಕೂಡೋಣ, ಮಾತಾಡೋಣ.

ಹಣ : — (ಬಂದು ಮೇಜಿನ ಮುಂದೆ ಕುಳಿತು ಕನ್ನಡಕವನ್ನು ಹಾಕಿ ಕೊಳ್ಳುತ್ತ) ಬರ್ರಿಲ ಕೂಡ್ರಿ. (ರಘೂತ್ತಮ ರಾಯನು ಕೂಡುವನು) ಏನ್ರೆಪಾ ಹಕೀಕತು? ಕಾಗ್ದ ಪತ್ರ ತಂದೀರೋ ಹೆಂಗ ದಾಖಲ ಮಾಡಲಿಕ್ಕೆ?

ರಘು :— ನನಗೆ ನಿಮ್ಮ ಕೇಳೋಣ ?

ಹಣ :— (ಕೋಪದಿಂದ) ನಿಮಗs ಮತ್ತ. ಇಲ್ಲದಿದ್ದರ ಏನು ಎದುರು ಗ್ವಾಡೀಗೆ ಕೇಳ್ಲಾ ?

ರಘು: — (ವೇಗವಾಗಿ) ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ ನಾ ಕೊಯತ್ತೂರು ಬಿಟ್ಟಿಟ್ಟು ಮೂರು ತಿಂಗ್ಳಾತು. ಕಾಂಚೀವರತಲೆ, ಸೇಲತಲೆ ಯಲ್ಲ ನನ್ನ ಬಂಧುಗಳಿರೋಣ. ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ, ನನ್ನ ಭಾವ ಮೈದುನ ಶಾಮು ಪಟ್ಟೇಣತ್ಲೆ ತಿರುವಳ್ಳೀಕೇಲಿ ಇರೋಣ. ಅವಗೆ ಎಲೆಟ್ರೆ ಆಫೀಸು ಕೆಲ್ಸ. ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ, ಡಿಯರ್ನೆಸ್ಸು ಅಲವನ್ಸು ಸೇರಿ ಹಕ್ಕೊಂಡು ಅವಗ ಎಪ್ಪತ್ನಾಲ್ಕು ರೂಪಾಯಿ ಸಂಬ್ಳ ಬರೋಣ.

ಹಣ :- - (ಬರೆಯಲು ಹವಣಿಸಿ) ಏ. ಏ ತುಸ ನಿಂದರ್ರೆಲಾ.

ರಘು :— (ಚಟ್ಟನೆ ಕುರ್ಚಿಯಿಂದೆದ್ದು) ನನಗ ಕೂಡೋಣ ಅಂದ್ರೆ ತುಂಭ ಇಷ್ಟಿಲ್ಲ.

ಹಣ :— ಆಲೇ ಇವ್ನಾ, ತುಸು ನಿಂದ್ರೂ ಅಂದ್ರ ಎದ್ದೇ ನಿಂತ್ರಲ್ಲ ಇವರು! ಕೂಡ್ರೆಲ. ಹಿಂಗ ಮೇಲು ಟ್ರೈನ್ ಓಡಸಬ್ಯಾಡ್ರೀ ಅಂದೆ

**ರಘು** :— (ಕೂಡುತ್ತ) ಇಂದು ನಾನು ಕಾಲೀಲೆ ಬಂದದ್ದು ಮೇಲು ಟ್ರ್ಯಸು.

**ಹಣ** :— ಕಾಲಿಲೆ ಬಂದದ್ದು ಅಂದ್ರೇನು, ಯಾರರ ಕ್ಯೆಲಿ ಬರ್ತಾರೋ ಹೆಂಗ? ಅದಿರ್ಲಿ, ತುಸ ಚಹ ಕುಡುದು ಹೇಳ್ರಿಲಾ ಎಲ್ಲ ಸುದ್ದೀನು. ಏ ಏನೇ—

**ವೆ. ಲ** :— ಬಂದೆ ಕಣ್ರೀ (ಬರುವಳು)

**ಹಣ** :— ಅವ ಕ್ರಿಷ್ಣ್ಯಾಗ ಹೇಳು, ತುಸ ಚಹಾನಾರ ಮಾಡ್ಲಿಕ್ಕೆ.

**ವೆ. ಲ**:— (ಬದಿಗೆ ಬಂದು) ಕೃಷ್ಣಾ, ಕೃಷ್ಣಾ.

**ಮಾಣಿ** :— ಬಂದೆಪ್ಪಾ ಬಂದೆ.

**ವೆ. ಲ** :— ಅದೇನು ಬಂದ್ಯೋ ನಾ ಬೇರೆ ಕಾಣೆ. ಏನ್ಗೋ ನೀನಲ್ಲಿ ಮಾಡ್ತಾ ಇರೋದು?

**ಮಾಣಿ** :— (ಪ್ರವೇಶಿಸಿ ಕೋಪದಿಂದ) ಕಡಲೆ ತಿಂತಿದ್ದು. ಎಂಥದು ಮಾರಾಯ್ರೆ, ನನಗೆ ಕೈ ನಾಲ್ಕು ಉಂಟಾ?

**ವೆ. ಲ** :— ಕೈ ಅಲ್ಲೋ ನಿನಗೆ ನಾಲ್ಕು, ಕಾಲು. ಬಂದವರೆದುರಿನಲ್ಲಿ ನಿನ್ನ ಕಂತೆ ಪುರಾಣ ಬಿಚ್ಚೋದು ಬೇಡ. ತಿಳಿಯಿತೇ? ಅವರಿಗೆರಡು ಲೋಟ ಟೀ ಅಂತೆ ಬೇಗ ಮಾಡಿಕೊಡು.

**ಮಾಣಿ** :— ಟೀ ಮಾಡು, ಟೀ ಮಾಡು ಟೀ ಎಂಥದು ಮಾರಾಯ್ರೆ ಮಾಡೋದು? ಟೀ ಡಬ್ಬನಲ್ಲಿ ಉಂಟು ಎಂಥದು?

**ವೆ. ಲ** :— ಟೀ ಇಲ್ವೇನು ಮನೇಲಿ?

**ಮಾಣಿ** :— ಉಂಟಾ ಮತ್ತೆ? ಉಂಟು ಎಂಥತು ಬುರ್ಸಾಸು

**ಹಣ** :— ಏ ಕ್ರಿಷ್ಟ್ಯಾ, ಏನು ಕೆತ್ತೆಬಜೇ ನಡಿಸೀದಲ್ಲೆ? ಈಗ ಯಾಕ ಬೇಕವು ಬುರ್ನಾಸು, ರಗ್ಗು, ಹಚಡ, ತಲೆದಿಂಡು ಯಲ್ಲಾ? ಹಾಸಿಗಿ ಹಾಸಲಿಕ್ಕೆ ಇನ್ನೂ ವ್ಯಾಳ್ಯ ಚಾರು ಘಂಟೇದ ಟೈಮು ಬಿದ್ದದೆ.

**ಮಾಣಿ** :— ಇವರು ಎಂಥದು ಮಾರಾಯ್ರೆ ಹೇಳೋದು? ನನಗೆ ಬೇಕ ಇವರ ಮಾತು. ಪಿರಿ ಪಿರಿ ಜನ ಮಾರಾಯ್ರೆ ಕಾಪಿ ಪುಡಿ ಉಂಟು. ಡಬ್ಬನಲ್ಲಿ. ಕಾಪಿ ಮಾಡಿ ನಾ ಕೊಟ್ಟು ಬಿಡೋದು, ಪಂಚಾಯತಿ ಬೇಡ. (ಒಳಗೆ ಹೋಗುವನು.)

**ಹಣ:**— (ಬರೆಯಲುದ್ಯುಕ್ತನಾಗಿ) ನಿಮ್ಹೆಸರೇನ್ರೆಪಾ?

**ರಘು:**— ಕೊಯತ್ತೂರು ರಹೋತ್ತ್ರಾ ಅಂತ ಕರಿಯೋಣ ಸಾಂಪ್ರದಾಯ. ಕೊಯತ್ತೂರು ಅಂದ್ರೆ ಕೊಯತ್ತೂರು ಅಂತ ಹೆಸರಾಗೋಣ ಒಂದೇ. ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ ಕೊಯತ್ತೂರಿನಲ್ಲಿ ಸಂಬಂಧಿಗಳು ಕೂಡ ಇಲ್ಲ. ಅವರೆಲ್ಲ ಕುಂಭಕೋಣತಲಿ ಕಾಂಚೀವರತಲಿ, ಸೇಲಂತಲೀನಾ ಇರೋಣ. ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ ನಾನು ಕೊಯತ್ತೂರು ಬಿಟ್ಟಿಟು ತುಂಭ ದಿನ ಆಯ್ತು. ಅಪ್ಪ ಮೂರು ತಿಂಗಳ ಕೊಳಂದು ಕೈಯಲ್ಲಿ ಕೊಟ್ಟಿಟು ಕಣ್ಮುಚ್ಚಿ ಕ್ಯೆಲಾಸ ಪೋರಟಾಯ್ತು. ನನಗೀಗ ಈ ನಾಪತ್ಮೂಣು ಸಂವತ್ಸರದಾಗ ಕಲ್ಯಾಣ ಮಾಡಿ ಮತ್ತೊಬ್ಬಳೊಟ್ಟಿಗೆ ಏನು ಅಳೋದು ಅಂತ ಹೇಳಿ ನನ್ನ ಭಾವ ಮೈದುನ ಶಾಮುಗೆ—ಮಂಜೆ ಇಲ್ಲ ಪಿಂಜೆ—ಅವಳು ನನ್ನ ಅಕ್ಕನ ಮಗಳಾಗೋದು ಅವಳ ಗಂಡ ಶ್ಯಾಮು ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ ಅವ ಪಟ್ಟಣತಲಿ ತಿರವಳ್ಳೀಣೀಲಿ ಮುನಿ ಎಲಿಟ್ರಿ ಆಫೀಸು ಕೆಲಸ. ಅವನಿಗೆ ಎಪ್ಪತ್ನಾಲ್ಕು ರೂಪಾಯಿ ಸಂಬ್ಳ ಬರೋದು, ಡಿಯರ್‌ನೆಸ್ ಅಲೆವೆನ್ಸು ಸೇರಿಹಾಕ್ಕೊಂಡು. ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ ಆ ಕೊಳಂದಿಗೆ ಕಡವುಲ್ದಯಬೇಕು

**ಹಣ:**— ಏನ್ರಲೀ ಬರಕೊಳ್ರೆಪಾ ನೀವು ಹೀಂಗ ಮಾತು ಉಳ್ಕಿಸಿದರೆ? ಈಗ ಒಂದು ಪುಟ ಬರಿಯೋ ಅಷ್ಟು ಹೇಳಿದ್ರಲ್ಲಾ. ಇದೆಲ್ಲ, ನಿಮ ಹೆಸರನ? ಅದೆಲ್ಲ ಪುರಾಣ ಇರ್ಲಿ, ಹೆಸರೇನು ಹೆಸರು?

**ರಘು:**— ಅದಕ್ಕ ಹೆಸರಂಡೋಣ ಎಲ್ಲಿಂದ? ಮೂರು ತಿಂಗಳು ಕೊಳಂದು (ದುಃಖದಿಂದ) ತಾಯಿ ಸತ್ತದ್ದು, ಅದಕಾಹ ಶಾಮುಗೆ ಕೊಟ್ಟಿಟು ಬಂದಿಟೆ. ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ—

**ಹಣ:**— ಯಾಕ ಹೇಳ್ಬೀಕ್ಕೆ ಬಂತು, ಅದನಾರ ಹೇಳಿದರೆ ಸೈ ಅಂದೇನು ಒಳ್ಳೇ ರಗಟೇನ ಹಚ್ಚಿಟ್ಟ ಮಹರಾಯ ಹೆಸರು ಕೇಳಿದರೆ ನಾಲ್ವತ್ತೈದು ಸಾಲಿನ ಒಂದು ಪುಟ ಆಗೋವಷ್ಟು ಹೇಳ್ತಾನೆ. ನಿಮ್ಮ ಹೆಸರೇನು ಹೆಸರು?

**ರಘು:**— ನೀವು ಕೇಳೋಣ ನನ್ನ ಹೆಸರಾ?

**ಹಣ:—** ಮತ್ಯಾಂದ್ರ, ನನ್ನ ಹೆಸರು ನಿಮ್ಮನ್ನ ಕೇಳ್ಳೇನು? ಹೂ, ನಿಮ್ಮ ಹೆಸರೆ.

**ರಘು:—** ಕೊಯತ್ತೂರು ರಘೋತ್ತರಾ.

**ಹಣ:—** ಯಾವ ತೂರು ಅಂದ್ರಿ?

**ರಘು:—** ಕೊಯ್ತೂರು, ಕೊಯಾ ತೂರು, ದಕ್ಷಿಣದೇಶದಲ್ಲಿ ಅದಲ್ಲಾ.

**ಹಣ:—** ದಕ್ಷಿಣದೇಶ ಅಂತ ಬ್ಯಾರೆ ಹೇಳ್ಬೇಕೇನು? ಮಾತಿನ ಸ್ಪೀಡ್ ನೋಡಿದರs ಗೊತ್ತಾಗುವದಿಲ್ಲ? ಅದಾವ ತೂರು ಹಸಂನು ಹೇಳ್ರಿಬಾ.

**ರಘು:—** ಕೊಯ್ತೂರು ಗೊತ್ತಿಲ್ಲಾ, ಸೇಲಂತಕ ಸಮೀಪ.

**ಹಣ:—** ಸೇಲ್ಂತಕ! ಎಲ್ಲೀ ಹೆಸರುಗಳು ಹೇಳ್ತಾನೀ ಮಾರ್ಸ್ಟ್ಯಾಯು? ಹಿಂದೂಸ್ತಾನದೊಳಗಾರ ಅವ್ರೋ ಇಲ್ಲೊ? ಇವ ಮನಾರ ಪ್ಲಾರ್ ಪ್ರಿಜನ್ಸ್ಟರ್ ಎಂಕ್ಸ್ಚೇಂಜ್ದೊಳಗೇನಾರ ಪರಪಾಟಾಗಿ ಮಿಸ್‌ಸೆಂಟ್ ಆಗಿ ಬಂದಾನೋ ಹೆಂಗ? ಬರೋಬ್ಬರ್ ಹೇಳಬಾರದೆ, ಒರೇ ತೂರು ಅಂಬೋದೊಂದ ತಿಳಿತ.

**ರಘು:—** ಕೊಯತ್ತೂರು, (ಸಾವಕಾಶವಾಗಿ) ಕ್ವ—ಯ—ತ್ತೂ—ರು.

**ಹಣ:—** (ಒಮ್ಮೆಲೆ ಹಸನ್ಮುಖಿಯಾಗಿ) ಕೊಯಿಂಬತ್ತೂರಾ? ಅಯ್ಯೊ, ಮಾರ್ಸ್ಟ್ಯಾಯು ಕೊಯಿಂಬತ್ತೂರು ಅಂತ ಅನಬಾರದಾಗಿತ್ತೇ? ಅದೇನು ಕೊಯ್ ಅಂತೀದಿ, ತೂರು ಅಂತೀದಿ? ಸರಿ, ಕೊಯಿಂಬತ್ತೂರು. ಅಂತು ತಿಳಿತು, ಹೆಸರೇನ್ರಿಪಾ?

**ರಘು:—** ರಹೋತ್ತರಾ.

**ಹಣ:—** ರಹೋತ್ತರಾ! ಇದೇನು ಹೆಸರ್ರಿಪಾ? ಛಲೋ ಹೇಳ್ರಿಲಾ. ಅದೇನು ಹಂಗ್ಯಾಕ ಮಾತು ಗಂಟ್ಲದಾಗ ನುಂಗ್ಲಕ್ಕೆ ಹತ್ತೀರಿ?

**ರಘು:—** (ಸಾವಕಾಶವಾಗಿ) ರಹೋತ್ತಮುರಾ.

**ಹಣ:—** ರಘೋತ್ತಮುರಾವೆ! (ನಿಟ್ಟುಸುರು ಬಿಟ್ಟು) ಸಾಕು ಬಿಡ್ರಿಪಾ, ಬದುಕಿದೆ ಕೊಯಿಂಬತ್ತೂರು ರಘೋತ್ತಮುರಾವ (ಬರೆದು) ತಂದೀ ಹೆಸರೂ?

**ರಘು:—** ಜಗ್ರಬಾಣಿರಾ.

ಬಣ :— ಜಗ್ರಬಾಣಿರಾ ! ಅಂದ್ರೆ.

**ರಘು** :— ಜಗ್ರಬಾಣಿರಾ ಜಗ್ರಬಾಣಿ ಅನ್ನೋದಿಲ್ಲವಾ ಅಂಡವಗೆ?

**ಹಣ** :— ಮತ್ತೇನೊ ಮರಾಡ ಹಾಕಿನ್ನಲ್ಲಪಾ ಇವ. ಅದೇನು ಹೆಸರು ತಿಳಿಯಲ್ಲಂಗ ಹೇಳ್ರಲಾ.

**ರಘು** :— ಜಗ್ರಬಾಣಿರಾ.

**ಹಣ** :— ಚಕ್ರಪಾಣಿರಾವೆ? (ಬರೆದು) ಹೂ, ಏನು ಖಟ್ಲೆ ಅದು? ಅದರ ಮಾಹಿತಿ ಮಾಡಿ ಕೊಡ್ರಲಾ.

**ರಘು** :— ಏನು ಮಾಡಿಕೊಡೋಣ? ನನ್ನ ಮಾಡಿಕೊಡೋಣ ಅಂತ ನೀವು ಅಂಬೋಣ

**ಹಣ** :— ಅಂದೆ ಏನ ಹಕೀಕತು? ನೀವು ಬಂದದ್ದು ಏನು ವಿಷಯ ಅಂದೆ.

**ರಘು** :— ಪಂಢರಪುರಕ್ಕೆ ಹೋಯಿಟ್ಟಿಟು ಕಾಲೀಲೆ ಟ್ರೈನ್ ತಾನೆ ಬಂದೆ. ಅಲ್ಲಿ ಇಲ್ಲಿ ಹೋಯಿಟ್ಟಿಟು ಕಡಸೀಕೆ ಇಲ್ಲೆ ಬಂದಿಟೆ. ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ ಮೂರು ದಿವಸ ಆತು ಕೂಳುಂಡ. ಅಲ್ಲಿ ಒಬ್ಬ ಮರಾಠಾಯ ದಕ್ಷಿಣಾದಿ ಬ್ರಾಹ್ಮಣ ಬಂದಿದ್ದ. ಅವಂದಾ ಒಂದು ಅನ್ನ, ಪೊಡಲಂಗಾಯ ಕೂಟು ಮಾಡಿ ಹಾಯಿ ಟಿಟ. ಇದು ಈಗ ಯಾಕೆ ಹೇಳೋಕೆ ಬಂತಂತಂದ್ರೆ ನನ್ನ ಹಣಯೆಲ್ಲ ಸಂಬಂಧಿಗಳ ಹೆಣಕ್ಕೆ ಹಾಯಿಟ್ಟಿಟು ಬಂದಿಟೆ. ಇರೋದ್ರೊಳಗೆ ಅವ ತಾಮುನೆ ಕೊಂಚ ತೇವಲೆ ಅವ ಕೂಡ ಹಣ ಎಂದರೆ ಪ್ರಾಣ ಬಿಡೋವ. ಕಾಲಾಗೆ ಕೊತ್ತೋದಂಗ ಅಂತ ಕಣಕ ಬರಡಿಡ್ತಾನವ.

**ಹಣ** :— ನೀವು ಇಷ್ಟೊತ್ತು ಹೇಳದ್ದು ನನಗೆ ಅಡ್ಡಗ್ವಾಡಿ ನೊಡ್ರೇಪ. ಒಂದಕ್ಷರದ ಮಜಕೂರ ತಿಳಿದಿದ್ರೆ ನೀವಿಟ್ಟೆ ಲಣೆ. ನಾನು ಬರಕೋಬೇಕು. ಒಂದೊಂದೆ ವಾಕ್ಯ ಸಾವಕಾಶ ಹೇಳ್ರಿ.

**ರಘು** :— ಪಂಡರಪುರಕ್ಕೆ ಹೋಯಿಟ್ಟಿಟು ಕಾಲೀಲೆ ಟ್ರೈನು ತಾನೆ ಬಂದೆ.

**ಹಣ** :— ಏನು, ಪಂಡರಪುರಕ್ಕೆ ಹೋಗಿದ್ರೀರಾ, ಹೋಗಿ.

**ಮಾಣಿ :—** (ಕೈಯಲ್ಲಿ ರಜು ಕಪ್ಪು ಸಾಸರಿನೊಂದಿಗೆ ಪ್ರವೇಶಿಸಿ) ಕಾಪಿ ಕಾಪಿ ತಂದಾಯ್ತು ಮಾರಾಯ್ರೆ ಕಾಪಿ. ಮತ್ತೆ ಬಿಸಿ ಹೋಗಲಿಕ್ಕೆ ಸಾಕು.

**ಹಣ :—** ಹೂ, ತೊಗೊಂಡು ಬಾರಲ. ಇಲ್ಲಿಡು ಮೇಜಿನ ಮ್ಯಾಲೆ. (ಮಾಣಿ ಇಟ್ಟು ನಿಲ್ಲುವನು) ಹೂ ನಡಿ, ಮತ್ಯಾಕ ನಿಂತಿ ಬಲಿಚಕ್ರವರ್ತಿ ಮುಂದ ವಾಮನ ನಿಂತ್ಹಂಗೆ? ಒಳ್ಳೆ ಮಾಣಿ ಬಂದಿದ, ಆಷಾಢ ಭೂತಿ ಹಂಥವ. ಹೂ. ತೊಗೊಳ್ರಿಲ.

(ರಘೂತ್ತಮರಾಯನು ತಕ್ಷಣ ತೆಗೆದುಕೊಂಡು ಎಲ್ಲವನ್ನೂ ಗಟಗಟ ಮೇಲಿನಿಂದ ಎತ್ತಿ ಕುಡಿದು ಕೆಳಗಿಡುವನು.)

ಎಲಾ ಇವನ, ಚಾಚೂ ಅನಕೋತನ ಕಾಫಿ ಕುಡುಸ್ತಾನಲ್ಲ, ಈ ಮೈಸೂರು ಹುಡಿಗಿ ಮನಿ ಸೇರಿ. ಏನೋ ಕೃಷ್ಟ್ಯಾ, ಕಾಫ್ಯಾರ ನೆಟ್ಟಗದ?

**ಮಾಣಿ :—** (ಎರಡನೆ ಬೆರಳನ್ನು ಮೇಲಕ್ಕೆ ತೋರಿಸುತ್ತ) ನೆಟ್ಟಗಿರೋದು ಎಂಥದು ಮಾರಾಯ್ರೆ, ಅದು ಏನ ತೆಂಗಿನ ಮರವಾ?

**ಹಣ :—** ತಲೀ ಹರಟೆ ಮಗ (ಸ್ವಲ್ಪ ಕಾಡಿದು) ಯಾಕ ಬಟ್ಟಾಸಿವ ಹುಟ್ಟು ಬುದ್ಧೀನಾ? ಅವ ಗೌಳೀನನೀರಿಗೆ ಹಾಲು ಬೆರಿಸಿ ಕೊಟ್ರೆ, ಇವ ಅದನ್ನ ಕುಡುದು, ಅದಕ್ಕ ನೀರು ಬೆರಿಸಿ ಕಾಫಿ ಮಾಡಿ, ಅದನ್ನ ಕುಡುದು, ಅದಕ್ಕ ನೀರು ಬೆರಿಸಿ ಇವ ತಂದಾನ. ಇದು ಕೂಡ ಆರಿ ಅಂಗಾರ ಆಗೆದಲ್ಲೋ. ಏ ಕೃಷ್ಟ್ಯಾ, ಅಲ್ಲೋ ಕಾಫಿ ಹೆಂಗಾರ ಇರ್ಲಿ ಗರಮ್ ಯಾಕಿಲ್ಲೋ ಗರಮು? ಹಂಗ್ಯಾಕ ಮಿಕಿ ಮಿಕಿ ಮಾರಿ ನೋಡ್ತೀದಿ, ಗರಮ್ಯಾಕಿಲ್ಲ ಅಂದೆ

**ಮಾಣಿ :—** ಆ ಜನ ಯಾರು ಮಾರಾಯ್ರೆ? ಗೌರಮ್ಮ ಎಂದು ಹೇಳಿ ಇಲ್ಲಿ ಜನ ಉಂಟಾ?

**ವೆ. ಲ :—** (ಪ್ರವೇಶಿಸಿ) ಯಾವ ಗೌರಮ್ಮ, ನೀವನ್ನೋದು?

**ರಘು :—** ಗೌರಮ್ಮ ಎಲ್ಲೀ ಅಂತ ಅವರ ಕೇಳಿಕೋಣ.

**ವೆ. ಲ :—** ಅವಳ್ಯಾರು ಹೇಳಕೂಡ್ದೇ?

**ಹಣ :—** ನನ ಖರ್ಮರಿಪಾ. ಗೌರಮ್ಮ ಅಂತ ಯಾವ ಅಂದ್ನೆ? ಕಾಫಿ ಗರಮ್ ಇಲ್ಲ ಅಂದೆ, ಗರಮ್ ಗರಮ್.

**ವೆ. ಲ :—** ಏನು ಹಾಗ್ತಾನೆ ಅಂದ್ರೆ?

ಹಣ. — ಇನ್ನ ಹ್ಯಾಂಗ್ರೆಪಾ ಹೇಳೋದು ಇವರಿಗೆ? ಚಹಾ ಭಾಳ ಹಂಗಿದ್ರೆ ದಸ್ತ್ಯಾಗ ವಾಟೀ ಹಿಡಕೊಂಡು ಕುಡಿತಾರಲ್ಲೀ.

ಮಾಣಿ:— ದಸ್ತ್ಯಾ! ವಾಟ್ಯಾ!! ಎಂಥದಯ್ಯ!!!

ಹಣ:— ಸ್ಸೈ, ಸ್ಸೈ. ದಸ್ತಿ ಅಂದ್ರ ಗೊತ್ತಿಲ್ಲನ? ದಸ್ತಿ ಅಂದ್ರೆ ಕಿಶಾ ಹಾಗಿದ್ದೋ ಅರಿವಿ.

ರಘು:— ಹೌದಾ, ಕಿಸೆ ಅಂತ ನಿನ್ನೋ ಳೋಣ ಸಮಾಗರ್ಥ ಆಗದು'

ಹಣ:— ಹಾಳಾಗಿ ಹೋಗಲಿ ಬಿಡ್ರಿ. ಇನ್ನ ನಿಮಗ ಕಿಸೆ ಅಂದ ಅರ್ಥ ಹೇಳಿ, ದಸ್ತಿ ಅಂದ್ರೆ ಅರ್ಥ ಹೇಳಿ, ಗರಮು ಅಂಬೋದರ ಅರ್ಥ ಮಾಡಿಕೊಡೋ ಅಷ್ಟು ಗರಜು ಬಿದ್ದಿಲ್ಲ ನನಗೆ. ಇದೆಲ್ಲ ಅನ್ನೋದು ಬಿಟ್ಟು ಗಸ್ತ್ಯಾಪ್ ಫಂಡನ ಕಾಫೀನ ಕುಡಿದಿದ್ರೆ ಛಲೋ ಆಗ್ತಿತ್ತು.

ವೆ. ಲ:— ಅಯ್ಯೋ, ಬಿಸಿ ಇಲ್ಲ ಅನ್ನೋದಕ್ಕೆ ಬಂದ ಸಾವೇ ಇದು?

ರಘು: — ಸೊಡಾ ಇಲ್ಲ ಅನ್ನೋ ಅಭಿಪ್ರಾಯ.

ಹಣ:— ಹೂ, ಅದಿರ್ಲಿ, ನಿನ್ನೇನ್ರೆಪಾ ಕೆಲಸ? ಏನು ಮಾಡ್ತಾನ ಅಂದ್ರಿ ನಿಮ್ಮ ಭಾವ ನ್ಯೈದನ?

ರಘು:— ಯಾರು ನೀವಂಬೋಣ ಶ್ಯಾಮನೇ? ಅವ ಎಲೆಕ್ಟ್ರಿ ಆಫೀಸು ಕೆಲಸ.

ಹಣ:— ಹೆಲೆಕ್ಟ್ರಿಕ್ ಹಾಪೀಜೇ, ತಡಿರಿ (ಬರೆಯುವನು) ಶ್ಯಾಮ ರಾವ, ಹೆಲೆಕ್ಟ್ರಿಕ್ ಹಾಫೀಜ. ಏನು ಕೆಲ್ಸರೆಪಾ ಅಲ್ಲೆ? ಅಂದ್ರೆ ಅವ ಏನು ಕಾರಕೂನ್ನೇ ಅಥವಾ ಪ್ಯುಯರ್‌ಮನ್ನೇ, ಏನಿದ್ದಾನವ?

ರಘು:— ಆಫೀಸಿನಿಂದ ಹೆಣಬೀಳೊ ಹಾಂಗ ಕಾಗದಗಳು ತರೋಣ ಮನೆಯೊಳಗ್ಗೂಡ ಬರೆಯೋಣ. ಅದೇನು ಕೆಲ್ಸನೋ ಅಂಡವನೇ ಬಲ್ಲ.'

ಹಣ:— ಸರಿ, ಹಂಗಾದ್ರೆ ಕಾರಕೂನ ಅಂಥಂಗಾತಲ್ಲ. ಏನ್ರೆಪಾ. ನಿಧಾನ ಹೇಳ್ರಿ. ಏನು ಅವನ ಮ್ಯಾಲೆ ನಿಮ್ಮ ಕೇಸು? ಅದು ಇಲ್ದೆಂಗ ಚಾಲೂ ಆಗೂದದ?

ರಘು:— ಯಾವ ಕೇಸು?

**ಹಣ** :— ಏನು ಹಂಗಂದ್ರ ? ಯಾವ ಕೇಸೂ ಅಂದ್ರ ! ಎವರ ಬಗ್ಗೆ ನಿಮ್ಮೇಸೂ ಅಂದೆ.

**ರಘು** :— ನನ್ನ ಕೇಸೂ! ನನ್ನ ಕೇಸು ಏನೂ ಇಲ್ಲ.

**ಹಣ** :— (ಕೋಪದಿಂದ) ಏನು, ಕೇಸಿಲ್ಲೇ? ಮತ್ತೇನು ಬರೇ ತ್ರಾಸ ಕೊಡ್ಲಿಕ್ಕೆ ಬಂದಿದ್ದೇನು ಹಂಗಾರ ?

**ರಘು** :— ತ್ರಾಸು ನಾನ್ಹೆಂಗ ತರೋಣ ? ಅವ ಅರ್ಜನಾ ಸಾರಿ ಕಡಿ ಇರೋಣ.

**ಹಣ** :— ಯಲಾ ಇವನ, ಮತ್ತೆದಕ್ಕ ಬಂದಿ ಅದನಾರ ಹೇಳಲಾ.

**ರಘು** :— ಮೂರು ದಿವಸ ಆತು ಕುಳ್ಳೊಂಡು....

**ಹಣ** :— (ಕೋಪಾವೇಶದಿಂದ) ಅದಕ ಏನಾರ ಅನ್ನದೇನು ಅಂತ ಬಂದೇನು ?

**ಮಾಣಿ** :— (ಮುಂದೆ ಬಂದು) ಫಾಡ್ಕ ಆತು. ನಾ ಹೇಳಿದ್ರೆ ಈ ಜನ ಕೇಳೋದು ಉಂಟಾ ? ಅವ ಕಕ್ಷಿದಾರ ಅಲ್ಲ ಅಂತ ನಾನು ಅವನ ಮುಖ ನೋಡಿ ಹೇಳಿದ್ದು. ರುಂಬಾಲ ಬೇಡವಾ ? ಅವನಿಗೆಂಥದು ಮಾರಾಯ್ರೆ ಪ್ರಕ್ಕಟ ಕಾಫಿ ಕೊಡದಾಯ್ತು.

**ಹಣ** :— ಆತು ಬಿಡ್ರಿ, ಛಲೋನ ಆತು. ಏಕೀಕರಣ ಪರಿಷತ್ತಿಗೆ ಒಂದು ಕನ್ನಡದ ಹೊಸ ಮಾದರೀನರ ಒಯ್ಬಹುದು. ನೀವು ಇಲ್ಲೆ ಇರ್ರೆಲಾ ನಾಳೆ ಹೈದರಾಬಾದಿಗೆ ಹೋಗೂದದ, ನಿಮ್ಮನ್ನೂ ಅಲ್ಲಿಗೇ ಒಯ್ತೇನಿ.

( ತೆರೆ ಬೀಳುವದು. )

## ದೃಶ್ಯ ೨

(ಮಾಣಿ ಅಡಿಗೆ ಮಾಡಿಟ್ಟು ಬಂದು ಒಳಬಾಗಿಲಲ್ಲಿ ಕುಳಿತಿರುವನು ಹಣಮಂತ ದೇಸಾಯರ ಪ್ರವೇಶ)

**ಹಣ** :— ಅಡಿಗಿ ಆತೇನೋ?

**ಮಾಣಿ** :— ಅಡಿಗಿ ಮಾಡಿಟ್ಟು ಸಮ ಹೊತ್ತಾಯ್ತು ಮಾರಾಯ್ರೆ ಬಿಸಿ ಹೋಗಲಿಕ್ಕೆ ಸಾಕು.

ಹಣ :— ಏನೇನು ಮಾಡೀಯಲ ?

ಮಾಣಿ : — ಅನ್ನ, ಕೊದ್ದೇಲು—

ಹಣ :— ಗೊದ್ದೆಲು ! ಹುಂಗಂದ್ರೇನೋ, ತೆಲುಗ ಮಾತಿದ್ದ ಹಂಗ ಆದದು.

ಮಾಣಿ :— ಅಪ್ಪಿ ನಾರಾಯ್ರು, ಆದೀತಾ ?

ಹಣ :— ಅಷ್ಟೇ ಹಂಗಸ್ನಲಾ ಇನ್ನ ?

ಮಾಣಿ: — (ವೇಗದಿಂದ) ಗಣಸು ಹಪ್ಪಳ, ಗುಜ್ಜೆಕಾಯಿ, ಉಪ್ಕರಿ, ಸಾಂಗು, ಹಣ್ಣುಟಿ ಬಜ್ಜಿ, ಪತ್ರೊಡೆ, ಹಲ್ಸಟ್ಟು—

ಹಣ : — ಸ ಏ ಹಲ್ಸಟ್ಟೀ ಉಸುರು ಸಿಕ್ಕೀತೋ, ಒಂದೊಂದೆ ಹೇಳಲ.

ಮಾಣಿ :— (ಸಾವಕಾಶವಾಗಿ) ಗಣಸು ಹಪ್ಪಳ, ಗಜ್ಜೆಕಾಯಿ, ಉಪ್ಕರಿ, ಸಾಂಗು, ಹಣ್ಣುಟಿ ಬಜ್ಜಿ, ಪತ್ರೊಡೆ, ಹಲ್ಸಟ್ಟು, ಹಲಸಿನಕಾಯಿ ಕೊಟ್ಟೆ.

ಹಣ .— (ಕೋಪದಿಂದ) ಯಾರು ನಿಮ್ಮಪ್ಪನ ಮನೀದು ಅಂತ ಕೊಟ್ಟೇನು ? ಹಲಸಿನಕಾಯಿ ಯಾವಗೆ ಕೊಟ್ಟೆ ? ಯಾರ್ನ ಕೇಳೀ ನೀನ. ಕೊಟ್ಟೆ ?

ಮಾಣಿ : — ನಾನು ಯಾರಿಗೆ ಕೊಟ್ಟದ್ದು ಉಂಟು ನಾರಾಯ್ರೆ? (ಅಳುತ್ತ) ನನ್ನ ಮೇಲೆ ಜೋರು ಮಾಡೋದಾ ?

ವೆ ಲ :— (ಪ್ರವೇಶಿಸಿ) ನೀವೇಕೆ ಅವನ ಮೇಲೆ ಕೋಪ ಕಾತಾರ ಇರೋದು ? ಅವನೇನು ಮಾಡಿದ್ದಾನೆ ಈಗ ?

ಹಣ — ಏನು ಮಾಡ್ಯಾನೊ ಅವಗೆ ಕೇಳು. ಇವಗ್ಯಾಕ ಬೇಕು ಇಲ್ಲದ ಪಂಟು ? ಹಲಸಿನಕಾಯಿ ಒಯ್ದು ಯಾರಿಗೋ ಕೊಟ್ಟ್ಯಾನಂತ.

ವೆ ಲ :— ಅವನ್ಯಾರಿಗೆ ಕೊಟ್ಟಿದ್ದಾನೆ ? ಮನೇಲಿದೆಯಲ್ಲ.

ಹಣ :— ಹಂಗಾರ ಕೊಟ್ಟೆ ಅಂತ ಯಾಕ ಹೇಳದವ ?

ವೆ. ಲ :— ( ನಗುತ್ತ ) ಗ್ರಹಚಾರ. ಹಲಸಿನಕಾಯಿ ಕೊಟ್ಟೆ ಅಂದರೆ ಯಾರಿಗೊ ಅದನ್ನು ಕೊಟ್ಟ ಅಂತಾನೆ ಅವನ ಮೇಲೆ ನೀವು ರೇಗಿ ಬೀಳ್ತಾ ಇರೋದು ? ನಟ್ಟಿಗೊಳ್ಳೋಕೆ ಏನೋ ಮಾಡಿದ್ದಾನೆ.

**ಹಣ :**— ಹಿಂಗs, ಆತು ಬಿಡು. ರಾತ್ರಿ ಗಾಡೀಗ ಎಲ್ಲಾರೂನು ಹೈದರಾಬಾದಿಗೆ ಹೋಗೂದದ, ನನ್ನ ಭಾಷಣಾನು ತಯಾರಾಗ್ಯದ. ನಿನ್ನ ಶ್ರೀನ್ನ, ಆ ರಘೋತ್ತಮರಾಯನ್ನೂ ಕರೀಯಲಿ, ನೀವೇ ಸಭಿಕರು. ನಿಮ್ಮ ಮುಂದೆ ಭಾಷಣ ಮಾಡಿ ನೋಡ್ತಿನಿ.

(ವೆಂಕಟಲಕ್ಷ್ಮ್ಮ ಒಳಗೆ ಹೋಗಿ ಎಲ್ಲರನ್ನು ಕರೆದುಕೊಂಡು ಬರುವಳು. ಎಲ್ಲರೂ ಸಾಲಾಗಿ ಕುಳಿತುಕೊಳ್ಳುವರು. ಮೇಜಿನ ಮೇಲೆ ತಂಬಿಗೆಯೊಂದನ್ನಿಟ್ಟು ಆವೇಶಪೂರಿತರಾದ ಅಧ್ಯಕ್ಷರು ಅದರಲ್ಲಿ ಭಾಷಣವನ್ನು ಮಾಡುವರು.)

ಖರೋಖರ್ ಅಂದ್ರs, ಈಗ ಸಧ್ಯದ ಪರಿಸ್ಥಿತಿ ಅಂದ್ರ, ಈಗ ನಾವೇನು ಇದ್ದೀವಿ, ನೋಡ್ರೆಲಾ, ಕಣ್ತಗದು ನೋಡ್ರಿ, ಎರಡೂ ಕಣ್ತಗದು ನೋಡ್ರಿ. ಹಾಲಿ ಈಗ ಏನು ನಡದಾದ, ಭಾಷಾದ ಬಗ್ಗೆ ಚಳವಳಿ ನಡೀಲಿಕ್ಕೆ ಹತ್ಯಾದ, ಅಥವಾ ನನಗಂತು ಹೀಂಗ ಅನಸ್ತದ, ಪರಂತು ಬರೋಬರ್ ಈಗ ಸುಮಾರು ಅಜಮಾಸು ಅಂದಾಜ ಕಡಿಮಿ ಕಡಿಮೀ ಅಂದ್ರೆ, ಅಗದಿ ಮುಂದಿವಳಗೆ ಕಿಮ್ಮತ್ತಿನ ಪ್ರಶ್ನಿ ಅದಲಾ ಇದು. ಇದೂ ಈಗ ಇಲ್ಲೀನು ಹಜಾರಗಟ್ಲೆ ಮಂದಿ ಸೇರಿ ಜಮಾ ಆಗೀವಿ, ಆಗ್ತಿವಿ, ಆಗೋ ಆಗಿರಿಗಿದ್ದೀವಿ, ಅಂದ್ರ ನೋಡ್ರಿ, ಇದರ ಹಕೀಕತ ಹೀಂಗ ಅದ. ನಿಮ್ಮ ಸಮಾಜೂತಾನೂ ಹಿಂಗ ಇರಲಿಕ್ಕೆ ಬೇಕೂ ಅಂತ ನನ್ನ ಭಾವನಾನೂ ಅದs. ಇದೂ ಅಂದ್ರೆ ಈಗ ನಾವೇನು ಮಾಡ್ಲಿಕ್ಕೆ ಹತ್ತೀವಿ, ಮಾಡೋದಕ್ಕ ಕೈ ಹಾಕೋ ಅವರು ಇದ್ದೀವಿ. ಈಗೇನು ಚಳವಳಿ ನಡಿಸೀವಲ್ಲಾ. ಇದು ಪ್ರತಿ ಒಬ್ಬರೂ ಅಂದ್ರ ಹರೇಕ್ ಮನುಷ್ಯಾನೂ ತಂದು ಸ್ವಾಃ ಖಾಸಗೀ ಗೃಹಕೃತ್ಯದ ಮನೀ ಕೆಲಸ ಅಂತ ತಿಳುದು—ನಾ ಹೇಳೋದು ಈಗ ನಿಮ್ಮ ತಲ್ಯಾಗ ಬಂದಿರಬಹುದು. ಬಹುದೇನು ಬಂದೇ ಬಂದಿರತದ ನನಗ ಖಾತ್ರಿ ಅದ, ನಿಮ್ಗೆಲ್ಲಾರಿಗೂ ಇಲ್ದಿದ್ರೂ ಕನಿಷ್ಟ ಕನಿಷ್ಟ ಅಂದ್ರ ಒಂದು ಶಂಬರ್ ಮಂದಿಗಂತೂ ಹೀಂಗ ಪಸಂದು ಹೊಡದು ಹೇಳಿಧಂಗ ಆಗಿರತದ. ಅದರ ವಿಷಯು ಈಗ ಚರ್ಚೆ ಬ್ಯಾಡ, ಯಾಕs ನನಗ ಈಗ ಸವುಡಿಲ್ಲ ಅದು ಹಂಗಿರಲಿ ಈಗಿನ ಪ್ರಸಂಗ ನಾಲ್ಕು ಮಂದಿವಳಗ ನಾವೂನು ತಲಿ ಎತ್ತಿ, ನಮದೂ ಒಂದು ಜನಾಂಗ ಅದೆ, ಎಷ್ಟು ಹರದ್ರು, ಹಂಚಿಡ್ಯಾಗಿ, ಹಾಳಾಗಿ ಹೋಗಿ, ತುಂಡು ತುಂಡಾಗಿ, ಅಧ್ವಾನಾಗಿ, ಮೂರಾಬಟ್ಯಾಗಿ ಹೋಗಿದ್ರೂನು ಹೋಗ್ತಾ ಇದ್ರೂನು, ಹೋಗೋದಿದ್ರೂನು, ಕಡಿಮಿ ಕಡಿಮಿ ಅಂದ್ರ ಒಂದು ಆಶನೆ

ಭಾಗ ಅನ್ರಿ, ಜರ್ ಇದಕ್ಕ ನಿಮ್ಮ ಕಬೂಲಿ ಇಲ್ಲ ಅಂದ್ರ ಅಕ್ರಾಣಿ ಅನ್ರೆಲಾ. ಅಗದೀ ನಮ್ಮವರಲ್ಲ ಅನ್ನೊ ಹಾಂಗ ಆಗಿ ನಮ್ಮ ನಮ್ಮ ಒಳಗೆ ನೀವು ಮಾತಾಡೋದು ಯಾವ ಕನಶ್ರೆಪಾ ಅಂತ ಕೇಳೋ ಪರಿಸ್ಥಿತಿ, ದುಸ್ಥಿತಿ ಬಂದು ಹಾಜರೀ ಆಗ್ಯದ. ಈಗಿನ ಸಂದರ್ಭ ಇಷ್ಟು ಕೆಟ್ಟ ಅದ, ಕೆಟ್ಟ ಅದನೊ ಛಲೋ ಅದನೊ ಅದನ್ನ ಹೇಳ್ಳಿಕ್ಕೆ ಹೋಗೋದುಲಾ. ಯಾಕ ಅಂದ್ರೆ ಅದು ಈಗ ಬ್ಯಾಡ. ನೋಡ್ರೀ, ನೀವು ಅಂದರೆ ನಾವು, ತಿಳದವರ ಇದ್ದೀವಿ, ಎಲ್ಲ ಮಾಹಿತಿ ಇದ್ದವ್ರೆ ಇದ್ದೀವಿ, ಇದು ಇದು ಹಿಂಗ ಓಂಗ ಅಂತ ಮಾಹಿತಿ ಮಾಡಿಕೊಡೋದು, ಎಲ್ಲಾದರ ಹಕೀಕತ್ತು ನಿಮಗ ಅಂದರ ಸಭಿಕರಿಗೆ ಪರಿಚಯ ಮಾಡಿಕೊಡೋದು ನನ್ನ ಮುಖ್ಯ ಕರ್ತವ್ಯನ ಅದ. ಯಾಕs ಯಾಕs ಅಂದೀರಿ, ಅದು ನನ ಕರ್ತವ್ಯ ಅದ; ಮೊದಲನೇ ಕರ್ತವ್ಯ ಅದ; ಮುಖ್ಯ ಕರ್ತವ್ಯ ಅದ. ಇಲಾ ಅಂದ್ರೆ ನೀವೆನಬಹುದು, ನೀವು ಅಂದ್ರ ನೀವಲ್ಲ ಇನ್ನೊಬ್ಬ ಅನಬಹುದು, ಮತ್ತೊಬ್ಬ ಅನಬಹುದು, ಇವ ಏನಪಾ, ನಾವು ಹೋಟು ಕೊಟ್ಟು ಚುನಾಯಿಸಿದ ಅಧ್ಯಕ್ಷ. ಇರ್ಲಿ ಆ ಭಾಗ ಹಾಂಗಿರಲಿ. ನಾವು ಇಷ್ಟು ಅಗದೀ ಭೋಳೇ ಮಂದಿ ಇದ್ದೀವಿ, ಇದು ಯಾರಿಗೂ ಅತಿಶಯೋಕ್ತಿ ಅನಸಬಾರದು. ನಾನು ನಿಮ್ಮೆದುರಿಗೆ, ಇಷ್ಟು ಕಲತು ಮುಂದ್ಯಾಗ ನಿಂತು, ನಾನು ಹರ್ ಏಕ್ ಒಬ್ಬ ಸಣ್ಣ ಹುಡುಗನ ದೇಖೀಲು ಬಂದ್ರ ಅವಗ ಬರೋಬ್ಬರ್ ಉತ್ತರ ಕೊಡೋದು ನನ್ನ ಕರ್ತವ್ಯ ಅದ. ಯಾಕ? ವಜನ್‌ದಾರಿ ಜಾಗಾದಾಗ ಕೂತು ಬೇಜವಾಬ್ದಾರಿ ಉತ್ತರ ಕೊಡೋದು ಗೈರು ಆಗ್ತದೆ, ಮುಂದ್ಯಾಗ ಚಾಷ್ಟ ಮಾತಾಗ್ತದೆ.

(ಸಭೆಯ ಕಡೆ ನೋಡಿ, ಹೊಡಿರಿ ಕೈ ಎನ್ನುವರು. ಎಲ್ಲರೂ ಚಪ್ಪಾಳೆ ತಟ್ಟುವರು)

## ದೃಶ್ಯ ೩

(ರೇಲ್ವೆ ಸ್ಟೇಷನ್ನಿನಲ್ಲಿ, ಹಣಮಂತ ದೇಸಾಯರು ಗಡಿಬಿಡಿಯಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಿದ್ದಾರೆ. ಗಾಡಿಯಲ್ಲಿ ನರಸಮ್ಮ. ವೆಂಕಟಲಕ್ಷ್ಮ ರಘೂತ್ತಮ ರಾಯ ಕುಳಿತಿದ್ದಾರೆ. ಸಾಮಾನುಗಳನ್ನು ಮಾಣಿಯ ಸಹಾಯದಿಂದ ರಾಯರು ಗಾಡಿಯಲ್ಲಿ ತುಂಬುತ್ತಿದ್ದಾರೆ. ಎಂದೂ ರೈಲು ಪ್ರಯಾಣವನ್ನೆ ಮಾಡದ ಮಾಣಿ ಆ ಜನಸಂದಣಿಯನ್ನು ನೋಡಿ, ರೈಲಿನ ಚೀರಾಟಕ್ಕೆ ಬೆದರಿ ಕಕ್ಕಾಬಿಕ್ಕಿಯಾಗಿದ್ದಾನೆ.)

**ಹಣ** :— ಏನೂ ತಿಕೀಟೂನು ಬಂದೋಬಸ್ತು ಪೆಟಿಗಿ ಸೇರಿಸೀಯಾ?

**ವೆ. ಲ** :— ಎಲ್ಲ ಭದ್ರವಾಗಿವೆ ಸಾಮಾನು ಎಲ್ಲ ಇಟ್ಟಾಯಿತು ತಾನೆ?

**ಹಣ** :— ಧರ್ ಒಂದು ಸಾಮಾನಾನು ಎಣಿಸಿ ಕೊಟ್ಟೇನಲ್ಲ, ಹದಿ ಮೂರು ಅವನೋ ಇಲ್ಲೊ?

**ವೆ. ಲ** :— (ಗಾಡಿಯಲ್ಲಿಟ್ಟ ಸಾಮಾನುಗಳನ್ನು ಎಣಿಸಿ) ಹನ್ನೆರಡೇ ಇವೆ! ಇನ್ನೊಂದು ಸಾಮಾನು ಯಾವುದು ಮತ್ತೆ ಅಂದ್ರೆ.

(ಫಸ್ಟ್ ಬೆಲ್ಲು ಆಗುವದು)

**ಹಣ** :— ಜಲ್ದಿ ನೋಡಲ, ಗಂಟಿ ಹೊಡಲಿಕ್ಕೆ ಹತ್ಯಾದ. ಇನ್ನೊಂದು ಯಾವುದು ಹಂಗಾರ?

**ವೆ. ಲ** :— ಹಾ, ಜ್ಞಾಪಕವಾಯಿತು. ನಿಮ್ಮ ರುಮಾಲು ಕೂಡ ಸೇರಿಸಿ ತಾನೆ ಹದಿಮೂರು?

**ಹಣ** :— ಛೇ ಅಲ್ಲ ತಗಿ. ರುಮಾಲು ತಲಿ ಯಾಂವಾರ ಸಾಮಾನ ದಾಗ ಎಣಸತಾರೇನು? ಏ ಕ್ರಿಷ್ಟ್ಯಾ.

**ಮಾಣಿ** :— (ಬೆಚ್ಚಿಬಿದ್ದು) ಏನು ಮಾರಾಯ್ರೆ?

**ಹಣ** :— ಹಿಂಗ್ಯಾಕ ಮುಕ ರಾವು ಬಡದವರ್ಹ್ಯಾಂಗ ಅದನೋ? ಎಲ ಇವನs ಆ ಪೆಟಿಗೀ ಮ್ಯಾಲೆ ಯಾಕ ಕೂತಾನ ಇವ! ಆಕೀ ಪಿಟೀಲಿನ ಪೆಟಿಗಿ ಅದು.

**ವೆ. ಲ** :— ಅಯ್ಯೊ, ಅದರ ಮೇಲೆ ಕೂತಿದ್ದಾನೆಯೆ! ಏನಾಗಿ ಹೋಯೋ ನೋಡಿ ಅದರ ಗತಿ ಸಧ್ಯ.

**ಹಣ** :— ಆಗೋದೇನಾಗ್ತದ, ಇಲ್ಲಿ, ಒಳಗಡಲ.

(ರೈಲು 'ಕೂ' ಎನ್ನುವದು.)

ಏ ಕ್ರಿಷ್ಟ್ಯಾ, ಕ್ರಿಷ್ಟ್ಯಾ.

(ಮಾಣಿ ಪೂರ್ತಿ ಕಕ್ಕಾಬಿಕ್ಕಿಯಾಗುವನು.)

ಏ ಕ್ರಿಷ್ಟ್ಯಾ, ದೌಡು ಕೂಡಲ, ಜಲ್ದಿ ಕೂಡು. ಎಲ ಇವನ, ಜಲ್ದಿ ಪೆಟಿಗ್ಯಾಗ ಕೂಡೋ. ಎಲ್ಲಿ ಹೋದ ಇವ? (ಮಾಣಿಯನ್ನು ಕಾಣದೆ ಕೆಳಗಿಳಿಯುವರು.) ಎಲ್ಲಿ ಹೋದ ಇವ ಅನಬೇಕು? ಒಳ್ಳೆ ವ್ಯಾಳ್ಯಕ್ಕೆ ಗೆವ್ ಮಾಡಿದನಲ್ಲ. ಕ್ರಿಷ್ಟ್ಯಾ ಗಾಡ್ಯಾಗೇನಾರ ಹತ್ಯಾನೋ ಹೆಂಗೆ?

ವೆ. ಲ:— ಇಲ್ಲವೇ, ಎಲ್ಲಿ ಹೋದ ಮತ್ತೆ? ಅವನಿಲ್ಲದೆ ಹೋಗಿ ಅಲ್ಲಿ ಕಾಫಿ ಊಟ ಇಲ್ಲದೆ ಉಪವಾಸ ಸಾಯಬೇಕಾದೀತು, ಆಮೇಲೆ! (ಕೆಳಗಿಳಿಯುವಳು.)

ನರ:— ಒಳ್ಳೆ ಆಯ್ತ್ತುದ ಹೊತ್ತಿಗೆ ಎಲ್ಲಿ ಹಾಳಾಗಿ ಹೋದ ಈ ಹುಡುಗ! ಅವನೇ ಇಲ್ಲದಿದ್ರೆ ನಾನು ವೈಲಿಗಿ ಕೂಳು ತಿನಬೇಕಾದೀತು ಅಲ್ಲಿ ಹೋಗಿ. ಎಲ್ಲಿ ಹೋದ ಅನಬೇಕು ಹಂಗಾರ? (ಕೆಳಗಿಳಿಯುವಳು.)

ರಘು:— ಇವ್ನು ಶೀಘ್ರ ಕಣ್ಣೆಮಿಂಚ ಕಣ್ಮಾಯ ಮಾಡಿ ಅವ ಹೋಗುವದಾದರೂ ಎಲ್ಲಿಗೆ? ಇಲ್ಲೆ ಎಲ್ಲಾದರೂ ಇರೋವ. (ಕೆಳಗಿಳಿಯುವನು)

(ಮಾಣಿಯನ್ನು ಹುಡುಕುವ ಗಡಿಬಿಡಿಯಲ್ಲಿರುವರು. ರೈಲು ಹೋಗುವದು.)

ಹಣ:— ಎಲ್ಲಿ ಸತ್ತಿದ್ದಾನಿವ, ಏ ಕ್ರಿಷ್ಟ್ಯಾ, ಕ್ರಿಷ್ಟ್ಯಾ.

(ದೊಡ್ಡೊಂದು ಪೆಟ್ಟಿಗೆಯಿಂದ ಓ ಎನ್ನುವನು.)

ಎಲ್ಲಿಂದಾನೋ 'ಓ' ಅಂತೀಯಲ್ಲೋ?

ಮಾಣಿ:— ಇಲ್ಲಿ ಪೆಟ್ಟಿಗಿಯಲ್ಲಿದ್ದೀನಿ ಮಾರಾಯ್ರೆ.

ಹಣ:— ಪೆಟಿಗ್ಯಾಗ! ಈ ಪೆಟಿಗ್ಯಾಗ ಯಾಕ ಕುಂತಿವ?

(ಪೆಟ್ಟಿಗೆಯ ಬಾಗಿಲನ್ನು ತೆಗೆಯುವರು. ಮಾಣಿ ಪಿಳಿ ಪಿಳಿ ಕಣ್ಬಿಡುವನು.)

(ಕಿವಿಗಳನ್ನು ಹಿಡಿದು ಮೇಲೆತ್ತಿ) ಇದರೊಳಗ್ಯಾಕ್ಕೂತ್ಯೋ ಕ್ರಿಷ್ಟ್ಯಾ?

ಮಾಣಿ:— ನೀವು ಹೇಳಿದ್ದು ಉಂಟಲ್ಲ ಮಾರಾಯ್ರೆ, ಪೆಟಿಗಿಯಲ್ಲಿ ಕೂಡು ಎಂದು.

ಹಣ:— (ಹಣೆ ಬಡಿದುಕೊಂಡು) ಆಗದಿ ಉತ್ತಮ ಆದ, ನಮ್ಮಾನಿ ನಳಗನ ಏಕೀಕರಣ!

— ಸಮಾಪ್ತ —